

# ಅಕ್ಕಮಹಾದೇವಿಯ ವಚನಗಳಲ್ಲಿ ಸಸ್ಯ, ಪಕ್ಷಿ ಮತ್ತು ಪ್ರಾಣಿ ಸಂಕುಲ ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ

ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತರುವ ನಿಬಂಧ)

ಸಂಶೋಧಕರು

*ಚನ್ನಬಸಪ್ಪ ಹಣಮಂತಪ್ಪಾ*

ಎಂ.ಎ., ಬಿ.ಈಡಿ

ಸಂಶೋಧನ ಮಾರ್ಗದರ್ಶಕರು

*ಡಾ|| ಸೋಮನಾಥ ಯಾಳವಾರ*

ಎಂ.ಎ., ಪಿಎಚ್.ಡಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ

ಬೀದರ



ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬

ಸೆಪ್ಟೆಂಬರ್-೨೦೦೯



# ಅಕ್ಕಮಹಾದೇವಿಯ ವಚನಗಳಲ್ಲಿ ಸಸ್ಯ, ಪಕ್ಷಿ ಮತ್ತು ಪ್ರಾಣಿ ಸಂಕುಲ ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ

ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು

*ಚನ್ನಬಸಪ್ಪ ಹಣಮಂತಪ್ಪಾ*

*ಎಂ.ಎ., ಬಿ.ಈಡಿ.*

ಸಂಶೋಧನ ಮಾರ್ಗದರ್ಶಕರು

*ಡಾ|| ಸೋಮನಾಥ ಯಾಳವಾರ*

*ಎಂ.ಎ., ಪಿಎಚ್.ಡಿ*

*ಕ.ರಾ.ಶಿ. ಸಂಸ್ಥೆಯ*

*ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ*

*ಬೀದರ*



ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬

ಸೆಪ್ಟೆಂಬರ್–೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಚನ್ನಬಸಪ್ಪ ಹಣಮಂತಪ್ಪಾ ಇವರು ನನ್ನ ಮಾರ್ಗದರ್ಶನದಲ್ಲಿ "ಅಕ್ಕಮಹಾದೇವಿಯ ವಚನಗಳಲ್ಲಿ ಸಸ್ಯ, ಪಕ್ಷಿ ಮತ್ತು ಪ್ರಾಣಿ ಸಂಕುಲ ಒಂದು ಅಧ್ಯಯನ" ಎಂಬ ವಿಷಯ ಕುರಿತು ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

ಡಾ. ಸೋಮನಾಥ ಯಾಳವಾರ
ಎಂ.ಎ. ಕನ್ನಡ ಡಿಪ್ಲೋಮಾ (ಭಾಷಾ ವಿಜ್ಞಾನ)
ಪಿಎಚ್.ಡಿ. (ಕನ್ನಡ) ಪ್ರಾಧ್ಯಾಪಕರು
ಕನ್ನಡ ವಿಭಾಗ
ಕ.ರಾ.ಶಿ. ಸಂಸ್ಥೆಯು
ಸ್ನಾತಕೋತ್ತರ ಕನ್ನಡ ಸಂಶೋಧನೆ ಬೀದರ.

ಸ್ಥಳ : ಬೀದರ

ದಿನಾಂಕ : 24/09/09

# ಪ್ರಮಾಣ ಪತ್ರ

**ಅಕ್ಕಮಹಾದೇವಿಯ ವಚನಗಳಲ್ಲಿ ಸಸ್ಯ, ಪಕ್ಷಿ ಮತ್ತು ಪ್ರಾಣಿ ಸಂಕುಲ ಒಂದು ಅಧ್ಯಯನ** ಎಂಬ ನಿಬಂಧವನ್ನು **ಡಾ. ಸೋಮನಾಥ ಯಾಳವಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೊತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.


*ಚನ್ನಬಸಪ್ಪ ಹಣಮಂತಪ್ಪಾ*
ಎಂ.ಫಿಲ್ ವಿದ್ಯಾರ್ಥಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ
ಬೀದರ.


ಸ್ಥಳ : ಬೀದರ
ದಿನಾಂಕ : 24/09/09

# ಪರಿವಿಡಿ

# ಅಧ್ಯಯನದ ಉದ್ದೇಶ, ಮಹತ್ವ ಮತ್ತು ವ್ಯಾಪ್ತಿ

ಭಾರತವು ಮಹಾನ್ ಪರಂಪರೆಯುಳ್ಳ ದೇಶ ಉತ್ಕೃಷ್ಟವಾದ ಸಂಸ್ಕೃತಿಯುಳ್ಳ ಜನ್ಮ ಭೂಮಿಯೆನಿಸಿದೆ. ಪ್ರಕೃತಿಯ ವರದಾನವಾದ ನಿಸರ್ಗ ಸಂಪತ್ತಿನಿಂದ, ಮಣ್ಣಿನ ಫಲವತ್ತತೆಯ ವಿಪುಲ ಅವಕಾಶಗಳಿಂದ ಪ್ರಪಂಚದ ಗಮನವನ್ನೇ ತನ್ನ ಕಡೆಗೆ ಸೆಳೆದು ವಿಶಿಷ್ಟ ಶಕ್ತಿ ಸಂಪನ್ನವಾಗಿದೆ. ಭಾರತೀಯರಲ್ಲಿ ಸದಾ ಕಾಲವು ಜಾಗೃತವಾಗಿರುವ ಧಾರ್ಮಿಕ ಭಾವನೆಯ ವಿಶಿಷ್ಟ ಶಕ್ತಿ ಹಾಗೂ ಆಗಾಧ ಚೈತನ್ಯಕ್ಕೆ ಇದು ಪೂರಕವಾಗಿದೆ. ಪ್ರೇಮ–ಸಹಕಾರ,ಶಾಂತಿ–ಸಮಾನತೆ, ಭಾವೈಕ್ಯತೆಯಂಥ ಉದಾತ್ತ ಮೌಲ್ಯಗಳನ್ನು ಸಾರುವ ಧರ್ಮಭೂಮಿ. ಅನೇಕ ಧರ್ಮ–ತತ್ವ–ಸಿದ್ಧಾಂತಗಳನ್ನು ಪ್ರತಿಪಾದಿಸಿದ ಧರ್ಮ ದುರಂಧರರ ವಾಸಸ್ಥಾನವಿದು. ಹೀಗಾಗಿ ಇದೊಂದು ಆಧ್ಯಾತ್ಮ–ಅನುಭಾವಗಳ ಆಗರವೆನಿಸಿದೆ. ಇದಲ್ಲದೆ ಅತ್ಯದ್ಭುತವಾದ ವೈಜ್ಞಾನಿಕ ಸಂಶೋಧನೆ, ಕ್ರೀಡೆ, ಸಾಹಸಗಳ ಮೂಲಕ ಆಶ್ಚರ್ಯಕಾರಿಯೆನಿಸುವ ಹೊಸ ಹೊಸ ಸಾಧನೆಗಳಿಂದ ಪ್ರಕೃತಿಯನ್ನೇ ತಮ್ಮಿಚ್ಛೆಯಂತೆ ನಿಯಂತ್ರಸಬಲ್ಲ ಅದ್ಭುತ ಶಕ್ತಿಯನ್ನು ಪಡದುಕೊಂಡು, ಭೌತಿಕ ಸಂಪತ್ತು ಸುಖಗಳ ಅನುಸಂಧಾನ ಮಾಡಿಕೊಂಡಿದೆ. ಪರಮಾರ್ಥ ಪ್ರಪಂಚದಲ್ಲಿ ದಾರ್ಶನಿಕತ್ವವನ್ನು ಪಡೆದಿರುವ ಮಹಾನ್ ವ್ಯಕ್ತಿಗಳು ಇಲ್ಲಿ ಆಗಿಹೋಗಿದ್ದಾರೆ. ಆ ಸಾಲಿನಲ್ಲಿ ಉತ್ಕೃಷ್ಟ ಹಿನ್ನಲೆಯನ್ನು ಹೊಂದಿರುವ ಆದಿಕಾಲದಿಂದಲೂ ಮಹಿಳೆಯರು ಗೌರವಾನ್ವಿತರೆನಿಸಿದ್ದಾರೆ. ಅಂಥ ಮಹಿಳೆಯರಲ್ಲಿ ಆಧ್ಯಾತ್ಮದ ಎತ್ತರಕ್ಕೇರಿ ಕಂಗೊಳಿಸುತ್ತಿರುವವರಲ್ಲಿ 'ಮಹಾದೇವಿಯಕ್ಕ' ಅತ್ಯಂತ ಪ್ರಮುಖಳು.

ಭಾರತೀಯ ಸ್ತ್ರೀಸಮಾಜದ ಪರಿಮಿತ ವಲಯದಾಚೆ ಕಾಲಿಟ್ಟು, ಅಪರಂಪಾರಿಕವಾಗಿರುವ ಆಧ್ಯಾತ್ಮ ಪ್ರಪಂಚದಲ್ಲಿ ದ್ರುವತಾರೆಯರಾಗಿ ಬೆಳಗಿದವರು ಮೀರಾಬಾಯಿ, ಅಂಡಾಳ್, ಲಲ್ಲೇಶ್ವರಿ, ಕಾರಿಕಾಲಮ್ಮೆ, ಸಖುಬಾಯಿ, ಮೊದಲಾದವರು, ಈ ರೀತಿ ಪ್ರಾಪಂಚಕ ಬದುಕಿನ ಹೋರಾಟದಲ್ಲಿ ಧೈರ್ಯ ಶಾಲಿಗಳಾಗಿ, ತ್ಯಾಗಜೀವಿಗಳಾಗಿ ಬಾಳಿ ಹೋಗಿರುವ ಮಹಿಳೆಯರಲ್ಲಿ ವಿಶಿಷ್ಟವಾಗಿ ಗುರುತಿಸಲ್ಪಡುವ 'ಮಹಾದೇವಿ' ಪುರುಷ ದಾರ್ಶನಿಕರಂತೆಯೇ ಅನುಪಮ ಸಾಧನೆ ಹಾಗೂ ಸಿದ್ಧಿಯನ್ನು ಪಡೆದುಕೊಂಡು ಉಜ್ವಲವ್ಯಕ್ತಿಯಾಗಿ ಬಾಳಿದಳು. ಭಾಷೆ, ಧರ್ಮ, ಕಾಲದ ಚೌಕಟ್ಟನ್ನು ಮೀರಿ ನಿಂತಿರುವ ಈ ಶರಣೆ, ದೈವೀ ಪ್ರೇಮದ ಮಹಾನ್ ಸಾಧಕಳು. ಧರ್ಮ ಪ್ರೇಮ, ಸತ್ಯ, ಶಾಂತಿ, ಸಹಕಾರ, ಸಮಾನತೆಯಂತಹ ಉದಾತ್ತ ಜೀವನ ಮೌಲ್ಯಗಳನ್ನು ಬೋಧಿಸಿ, ಅವುಗಳನ್ನು ಅನುಸಂಧಾನ ಮಾಡಿಕೊಂಡು ಇಲ್ಲಿಯ ಜನಮನದಲ್ಲಿ ಚಿರಂತನವಾಗಿ ಉಳಿದವಳು ಭಾರತೀಯ ಮಹಿಳಾ ಅನುಭಾವಿಗಳ 'ಪರಂಪರೆ'ಗೆ ತನ್ನದೇ ಆದ ವಿಶಿಷ್ಟ ಕಾಣಿಕೆ ನೀಡಿದವಳು ಆ ವಿಶಿಷ್ಟವಾದ ಅವಳ ಕ್ರಾಂತಿಕಾರೀ ಧೋರಣೆಯ ಬದುಕು,

ವೈರಾಗ್ಯಸಾಧನೆ ಹಾಗೂ 'ಮಹೋನ್ನತ'ವಾದ ಪಾರಮಾರ್ಥಿಕ ಸಿದ್ಧಿಯನ್ನು ಅವಳ 'ಸಾಹಿತ್ಯದ 'ಸಿರಿ'ಯೆಂತಿರುವ ವಚನಗಳ ಅಭಿವ್ಯಕ್ತಿಯ ಮೂಲಕ ಕಂಡುಕೊಳ್ಳುವುದು ಈ ಸಂಶೋಧನಾಧ್ಯಯನದ ಪ್ರಮುಖ ಉದ್ದೇಶ.

ಹನ್ನೆರಡನೆಯ ಶತಮಾನದ 'ಕಲ್ಯಾಣಕ್ರಾಂತಿ'ಯಲ್ಲಿ ಪ್ರಮುಖ ಪಾತ್ರ ವಹಿಸಿರುವ ಬಸವಾದಿ ಶರಣರೊಂದಿಗೆ ಇದ್ದುಕೊಂಡು ಅವರೊಂದಿಗೆ ಅಕ್ಕ ನಡೆಸಿದ 'ಸಾಂಸ್ಕೃತಿಕ' ಮಂಥನದಲ್ಲಿ ಮೂಡಿನಿಂತಿರುವ ಅವಳ ಆಧ್ಯಾತ್ಮ ಶಕ್ತಿಯನ್ನರಿಯುವುದು. ಜೊತೆಗೆ ಅಕ್ಕನ ಆತ್ಮಜ್ಞಾನವನ್ನು ಪ್ರಕೃತಿಯ ಹಿನ್ನೆಲೆಯಲ್ಲಿ ಗುರುತಿಸುವುದು ಈ ಅಧ್ಯಯನದ ಮಹತ್ವವನ್ನಬಹುದು.

ಹೆಣ್ಣನ್ನು ಮಾಯೆಯೆಂದು ಆತ್ಮಜ್ಞಾನಕ್ಕೆ ಅವಳು ಅನರ್ಹಳೆಂದು ಕಡೆಗಣಿಸುತ್ತಿದ್ದ ಕಾಲದಲ್ಲಿದ್ದ ಅಕ್ಕನ ಹೋರಾಟದ ಬದುಕು ಅನುಪಮವಾದುದು ಇಂಥ ವಿಷಯ ಸನ್ನಿವೇಶದಲ್ಲಿದ್ದುಕೊಂಡು, ಆ ಸಮಾಜ, ಸಂದರ್ಭ ಹಾಗೂ ರಾಜಕೀಯ ಪರಿಸ್ಥಿತಿಯನ್ನು ಎದುರಿಸಿ, ದಿಟ್ಟತನದಿಂದ ಅವುಗಳಿಂದ ಬಿಡಿಸಿಕೊಂಡು ಸತ್ಯಾನ್ವೇಷಣೆಗೆ ಅವಳು ಹೊರಟಿರುವುದು ಎಲ್ಲರಲ್ಲಿಯೂ ಆಶ್ಚರ್ಯ ಮೂಡಿಸುವಂತಹದ್ದು, ಮಹಿಳೆಗೆ ನಿರ್ಬಂಧವಾಗಿದ್ದ ಸಂಸಾರದ ಪರಿಮಿತ ಪರಿಧಿಯಿಂದ ಹೊರಬಂದ, ಸಂಪ್ರದಾಯಬದ್ಧ ಸಮಾಜವನ್ನು ಎದುರಿಸಿ ನಿಂತ ಸಂಗತಿಯೂ ಎಂದೆದೂ ಅಧ್ಯಯನಯೋಗ್ಯವಾದುದು ಮಹಾದೇವಿಯಕ್ಕನ ಈ ಹೋರಾಟದ ಜೀವನವನ್ನು, ಅವಳು ಅನುಭವಿಸಿರುವ ಕಷ್ಟ ಕಾರ್ಪಣ್ಯಗಳನ್ನು ಪ್ರಾಣಿ ಪ್ರಪಂಚ, ಪಕ್ಷಿ ಪ್ರಪಂಚ ಹಾಗೂ ಸಸ್ಯ ಪ್ರಪಂಚ ಪ್ರತೀಕವುಳ್ಳ ವಚನಗಳ ಆಧಾರದಲ್ಲಿ ಕಂಡುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಭಾರತೀಯ ಐತಿಹಾಸಿಕ ಅವಜ್ಞತೆಯ ಕಾರಣದಿಂದ, ಅತಿಭಕ್ತಿಯ ಆವೇಶದಲ್ಲಿ 'ಅನುಭಾವಿ' ವ್ಯಕ್ತಿಗಳೆಲ್ಲರನ್ನು ದೇವರ ಅವತಾರವೆಂದು ಗುರುತಿಸಿ ಆರಾಧಿಸುವ ಶ್ರದ್ಧೆಯಲ್ಲಿ 'ಆಕೆಯ ಚರಿತ್ರೆ' ವಾಸ್ತವಾಂಶಗಳು ಮರೆಯಾಗಿವೆ ಎಂಬುದನ್ನು ಹಲವು ಅಧ್ಯಯನಗಳು ತಿಳಿಸುತ್ತವೆ. ಅಕ್ಕಳು ಬದುಕಿ ಬಾಳಿ ಹೋದ ಕಾಲದ ನಂತರದ ಅವಳನ್ನು ಕುರಿತು ಸಾಹಿತ್ಯವು ಗಾಢಭಕ್ತಿ, ಅಭಿಮಾನಗಳಿಂದಲೇ ತುಂಬಿನಿಂತಿದೆ ನಂತರದ ಕಾಲದ ಕವಿಗಳ, ಸಾಹಿತಿಗಳ ಪುರಾಣಕಾರರ ಚರಿತ್ರೆ ನಿರ್ಮಾಣದಲ್ಲಿ ಅವಳ ಜೀವನದ ಹಲವಾರು ಸಮಸ್ಯೆಗಳಿಂದ ಜನನ–ವಿವಾಹ, ಪ್ರಯಾಣ, ಐಕ್ಯದಂತಹುಗಳು ಬಹುಚರ್ಚೆಗೆ ಗುರಿಯಾಗಿವೆ. ಇವುಗಳನ್ನು ಬಿಡಿಸುವ ನಿಟ್ಟಿನಲ್ಲಿ ಅಕ್ಕನ ಸೃಷ್ಟಿ ಪ್ರಪಂಚದ ವಚನಗಳೇನಾದರೂ ಸಹಕಾರ ನೀಡುತ್ತವೆಯೋ ಹೇಗೆ? ಎಂಬುದನ್ನು ಅಧ್ಯಯನದ

ಮೂಲಕ ಕಂಡುಕೊಳ್ಳುವ ಪ್ರಯತ್ನವಿದಾಗಿದೆ. ಅಕ್ಕನ ವಚನಗಳನ್ನು ಮುಖ್ಯವಾಗಿಟ್ಟುಕೊಂಡು ಈಗಾಗಲೇ ಆಕೆಯನ್ನ ಕುರಿತು ಅಧ್ಯಯನ ಮಾಡಿರುವ
ಪ್ರಮುಖ ಸಂಶೋಧನಗಳನ್ನು ಅನುಲಕ್ಷಿಸಿ ಪ್ರಧಾನವಾಗಿ 'ಪ್ರಾಕೃತಿಕ ಉಲ್ಲೇಖದ ವಚನಗಳನ್ನೇ ಅಧ್ಯಯನಕ್ಕೆ ಆಕರವಾಗಿಸಿಕೊಂಡು ಅಕ್ಕನ 'ಜೀವನೇತಿಹಾಸದ ಚೌಕಟ್ಟನ್ನು ನಿರ್ಧರಿಸುವುದು, ಆ ವಚನಗಳಲ್ಲಿಯೇ ವ್ಯಕ್ತಿವಾಗಿರುವ 'ಮಹಾದೇವಿ'ಯ ವ್ಯಕ್ತಿತ್ವ ಹಾಗೂ ಜೀವನ ಸಾಧನೆಗಳ ಸುಳುಹುಗಳನ್ನು ಕಾಣುವುದು ಆ ಮೂಲಕ ಅವಳ ಅನುಭಾವಿಕ ವ್ಯಕ್ತಿತ್ವದ ದರ್ಶನ ಪಡೆಯುವುದು ಈ ಪ್ರಬಂಧದ ಮಹತ್ವದ ಅಧ್ಯಯನವಾಗಿದೆ.

ಈ ನಿಟ್ಟಿನಲ್ಲಿ ಅಲ್ಲಲ್ಲಿ ಬಂದ ಬಿಡಿಲೇಖನಗಳನ್ನು ಸಂಗ್ರಹಿಸಿಕೊಂಡು, ಈ ವರೆಗೆ ಸಂಗ್ರಹಿಸಲಾಗಿರುವ ಮಹಾದೇವಿಯಕ್ಕನ ೩೫೪ ವಚನಗಳನ್ನು ಪರಿಶೀಲಿಸಿ, ಅವುಗಳಲ್ಲಿರುವ, ಪ್ರಕೃತಿ, ಪ್ರಾಣಿ ಪ್ರಪಂಚ, ಪಕ್ಷಿಪ್ರಪಂಚ ಹಾಗೂ ಸಸ್ಯ ಪ್ರಪಂಚಕ್ಕೆ ಸಂಬಂಧಿಸಿದ ವಚನಗಳು, ಆರಿಸಿಕೊಂಡು, ಅವುಗಳಲ್ಲಿ ಹುದುಗಿರುವ ಸಸ್ಯ, ಪ್ರಾಣಿ ಹಾಗೂ ಪಕ್ಷಿ 'ಸಂಸ್ಕೃತಿ'ಯನ್ನು ಕಂಡುಕೊಂಡು, ಆ ಮೂಲಕ 'ಮಾನವ ಬದುಕನ್ನು ರೂಪಿಸಿಕೊಳ್ಳುವ ಕಲೆಯನ್ನು ಹೇಗೆ ಸಾಧಿಸಿಕೊಳ್ಳಬಹುದೆಂಬುದನ್ನು ಅರಿತುಕೊಳ್ಳುವುದು. ಹಾಗೂ ಅದರೊಂದಿಗೆ ಪ್ರಾಣಿ, ಪಕ್ಷಿ, ಸಸ್ಯ ಸಂಕುಲಗಳಲ್ಲಿರುವ ಸಹಕಾರ, ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆ, ಶಾಂತಿ, ಸತ್ಯ, ಸೌಂದರ್ಯ ಪ್ರಜ್ಞೆಯನ್ನು ಮಾನವ ಜೀವನದೊಂದಿಗೆ ಹೇಗೆ ಅಕ್ಕ ತಾದ್ಯಾತ್ಮೀಕರಿಸಿಕೊಂಡು ಎತ್ತರವಾದಿ ಬೆಳೆದಳೆಂಬ 'ಅನುಭಾವ'ವನ್ನು ಅರಿತುಕೊಂಡು, ಅಕ್ಕನ ಅಪೂರ್ವ ವ್ಯಕ್ತಿತ್ವ ದರ್ಶನ ಮಾಡಿಕೊಳ್ಳುವುದು ಇಲ್ಲಿ ಮುಖ್ಯವಾಗಿದೆ.

ಅಕ್ಕಮಹಾದೇವಿಯ ವಚನಗಳನ್ನು 'ಆಧ್ಯಾತ್ಮ ಭಾವಗೀತೆಗಳು' ಎನ್ನಲಾಗುತ್ತಿದ್ದು, ಅವುಗಳನ್ನು ಅಕ್ಕ ಪ್ರಕೃತಿಯ ಹಿನ್ನೆಲೆಯಲ್ಲಿ ರಚಿಸಿರುವ ಅಭಿವ್ಯಕ್ತಿ ಕ್ರಮವನ್ನು ಕಾಣುವುದು. ಆ ವಚನಗಳ ರಚನೆಗೆ ಆಧಾರವಾಗಿರುವ-'ಭಾವ, ಭಾಷೆ, ಅಲಂಕಾರ, ಜಾಣ್ಣುಡಿ, ಲೋಕನುಡಿ ಪ್ರತಿಮೆ, ಸಂಕೇತ, ಪ್ರತೀಕ ಪ್ರಪಂಚಗಳನ್ನು ಗಮನಿಸಿ ಈ ಪ್ರಬಂಧದ ಉದ್ದೇಶ ಹಾಗೂ ಮಹತ್ವಕ್ಕನುಗುಣವಾಣಿ ಅದರ ವ್ಯಾಪ್ತಿಯನ್ನು ಅನುಕೂಲತೆಗಾಗಿ ಈ ಕೆಳಗಿನಂತೆ ಅನುಲಕ್ಷಿಸಿ ಒಟ್ಟು ಆರು ಅಧ್ಯಾಯಗಳಲ್ಲಿ ವಿಷಯ ವಿವೇಚನೆಯನ್ನು ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ 'ಈ ಪ್ರಬಂಧಕ್ಕೆ ಹಿನ್ನೆಲೆಯ ಸ್ವರೂಪವನ್ನೊದಗಿಸಲು ಪೂರಕವಾಗುವಂತೆ ಭಾರತೀಯ ಸಂಸ್ಕೃತಿ, ಮಹಿಳೆಯ ಸ್ಥಾನಮಾನ, ಶರಣರು, ಧಾರ್ಮಿಕ ಸ್ಥಿತ್ಯಂತರಗಳನ್ನು ಸಂಕ್ಷಿಪ್ತವಾಗಿ ಗಮನಿಸುವುದರೊಂದಿಗೆ ಸ್ತ್ರೀ ಸಮಾಜ ಸಾಧಿಸಿದ

ಪ್ರಗತಿಯನ್ನು ಅರಿಯುತ್ತ ಅದರಲ್ಲಿ ಆಕ್ಕನ ಮಹತ್ವನ್ನು ಅರಿಯಲಾಗಿದೆ. ಹಾಗೂ ಆ ಅಧ್ಯಯನದ ಉದ್ದೇಶಮ ಮಹತ್ವ ಹಾಗೂ ವ್ಯಾಪ್ತಿಯನ್ನು ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಈ ವರೆಗೆ ಸಂಶೋಧನೆಗೊಂಡಿರುವ ಅಕ್ಕನ ಜೀವನ ಚರಿತ್ರೆಯನ್ನು ಅನುಲಕ್ಷಿಸಿ, ಅವಳ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ದಾಖಲಿಸುವುದು.

ಮೂರನೆಯ ಅಧ್ಯಾಯದಲ್ಲಿ 'ಅಕ್ಕಮಹಾದೇವಿ'ಯ ಪೂರ್ವಕಾಲದಲ್ಲಿ ದಾಖಲಾಗಿರುವ ಪ್ರಾಕೃತಿಕ ಬದುಕನ್ನು ಕುರಿತು ಕನ್ನಡ ಸಾಹಿತ್ಯವನ್ನು ಗಮನಿಸುವುದು. ಅವುಗಳಲ್ಲಿಯ ಪ್ರಾಣಿ, ಪಕ್ಷಿ, ಸಸ್ಯ ಸಂಸ್ಕೃತಿಯನ್ನು ಅಧ್ಯಯನ ಮಾಡುವುದು.

ನಾಲ್ಕನೆಯ ಅಧ್ಯಾಯದಲ್ಲಿ ಅಕ್ಕನ ವಚನಗಳಲ್ಲಿ ಕಂಡುಬರುವ ಪ್ರಕೃತಿ, ಪ್ರಾಣಿ, ಪಕ್ಷಿ, ಸಸ್ಯಸಂಕುಲದ ವಚನಗಳನ್ನು ಹುಡುಕಿ, ಅವುಗಳಲ್ಲಿರುವ ಈ ಎಲ್ಲ ಪ್ರಪಂಚಗಳ ಸಾಂಸ್ಕೃತಿಕ ಬದುಕನ್ನು ಅಧ್ಯಯನ ಮಾಡುತ್ತ ಅವುಗಳ ಮೂಲಕ ಕಟ್ಟಿಕೊಂಡಿರುವ ಅಕ್ಕನ ಬದುಕನ್ನು ಅರಿತುಕೊಳ್ಳುವುದು ಹಾಗೂ ಆ ಮೂಲಕ ಅವಳು ಪಡೆದಿರುವ 'ದಿವ್ಯಾನುಭವವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಅಕ್ಕನು ~~ಈ~~ ವಚನಗಳ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿರುವ 'ವಿಶೇಷ ಜೀವನಾನುಭವವನ್ನು ಕುರಿತು ಅರಿಯಲಾಗಿದ್ದು, ಆ ಮೂಲಕ ವ್ಯಕ್ತವಾಗಿರುವ ಅಕ್ಕನ ವ್ಯಕ್ತಿತ್ವ ಹಾಗೂ ಅವಳ ಜೀವನ ದರ್ಶನವನ್ನು ಕಾಣಲು ಪ್ರಯತ್ನಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಅಕ್ಕನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿರುವ ಕಾಣಿಕೆಯನ್ನು ಕಂಡುಕೊಳ್ಳಲಾಗಿದ್ದು, ಆಕೆಯ ವಚನಗಳ ವೈಶಿಷ್ಟ್ಯಗಳನ್ನು ಅಧ್ಯಯನ ಮಾಡಲಾಗಿದೆ.

ಈ ಒಟ್ಟಿನಲ್ಲಿ ಈ ಎಲ್ಲ ಉದ್ದೇಶ, ವ್ಯಾಪ್ತಿಯ ಹಿನ್ನೆಲೆಯಲ್ಲಿ ಅಕ್ಕಮಹಾದೇವಿಯ 'ಅನುಭಾವಿ ವ್ಯಕ್ತಿತ್ವದ ವಿಶೇಷತೆಯನ್ನು, ಅವಳ ವಿಶ್ವವ್ಯಾಪಕವಾದ ವೈರಾಗ್ಯದ ಬದಕನ್ನು, ದೈವಿಪ್ರೇಮವನ್ನು ನಿಸರ್ಗದಲ್ಲಿ ನಿಗೂಢವಾಗಿರುವ ಆ 'ದೈವ'ವನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ, ಅವಳು ಅನುಭವಿಸಿರುವ ನೋವು, ನಲಿವು, ದರ್ಶನಾನುಭವವನ್ನು ಕಾಣಲು ಪ್ರಯತ್ನಿಸಲಾಗಿದೆ. ನನ್ನ ಪರಿಮಿತ ಅನುಭವ, ಆಲೋಚನೆಗೆ ದಕ್ಕಿಸಿಕೊಳ್ಳಬಹುದಾದ ವಚನಗಳನ್ನು ನಾನು ಅರ್ಥ ಮಾಡಿಕೊಂಡ ರೀತಿ ಸಹಾಯ ಪಡೆದ ಕೆಲವು ಗ್ರಂಥಗಳ ಸಹಾಯದಲ್ಲಿ, ಮಹಾವ್ಯಕ್ತಿತ್ವವುಳ್ಳ ಅಕ್ಕನ ದರ್ಶನಾತೀತ ವ್ಯಕ್ತಿತ್ವವನ್ನು

ಕಾಣಲಾಗಿಲ್ಲವೆಂದು ಅರಿವು ನನಗುಂಟಾಗಿದ್ದರೂ, ಪ್ರಾಕೃತಿಕ ನೆಲೆಯಲ್ಲಿ ಅವಳ ವ್ಯಕ್ತಿತ್ವವನ್ನು ಕಾಣುವ ಒಂದು ಹೊಸ ಪರಿಯ ಆನಂದ ನನಗಾಗಿದೆ, ಆದರೂ ಈ ಅಧ್ಯಯನದಲ್ಲಿ ಇನ್ನೂ ಕೆಲವರು ಸಂಗತಿಗಳನ್ನು ಗುರುತಿಸಬಹುದಾಗಿತ್ತು ಎನಿಸಿದರೆ ಅದಕ್ಕೆ ನನ್ನ ಪರಿಮಿತ ಜ್ಞಾನವೇ ಕಾರಣವೆಂದು ನಾನಿಲ್ಲಿ ವಿನಮ್ರವಾಗಿ ಹೇಳಬಯಸುತ್ತೇನೆ.

# ಅಕ್ಕಮಹಾದೇವಿಯ ಸಂಕ್ಷಿಪ್ತ ಜೀವನ ಚರಿತ್ರೆ

೧೨ ನೇ ಶತಮಾನದ ಶರಣರ ಸಮಾಜೋಧಾರ್ಮಿಕ ಚಳುವಳಿಯು ಜಾಗತಿಕ ಇತಿಹಸದಲ್ಲಿ ಒಂದು ಅಪೂರ್ವ ಘಟನೆ ಶಿವಶರಣರ ವೈಚಾರಿಕ ಕ್ರಾಂತಿಯಲ್ಲಿ ಮಧುರ ಭಕ್ತಿಯ ತೀವ್ರತೆ ವಿರಕ್ತಿಯ ಉತ್ಕಟತೆ, ನಿರ್ಭಯದ ನಿಲುವಿಗೆ ಪ್ರತೀಕವಾದವಳು ಮಹಾದೇವಿಯಕ್ಕ ಅನುಭಾವದ ಔನ್ನತ್ಯ ಮತ್ತು ಅಭಿವ್ಯಕ್ತಿಯ ಅನನ್ಯತೆಯಿಂದ ಭಾರತೀಯ ಅನುಭವ ಪರಂಪರೆಯಲ್ಲಿಯೇ ವಿಶಿಷ್ಟಳಾಗಿರುವ ಮಹಾದೇವಿಯಕ್ಕ ಶ್ರೇಷ್ಠ ಅನುಭಾವಿ ಮಾನವತಾವಾದಿ ಧೋರಣೆಗಳು, ಸ್ತ್ರೀ ಪರ ಅಶಯಗಳು ಅಂದಿನ ಸ್ತ್ರೀ ಸಮಾಜದಲ್ಲಿ ಮೂಡಿಸಿದ ಜಾಗೃತಿ ಮತ್ತು ಅತ್ಮ ವಿಶ್ವಾಸದ ಅನನ್ಯ ಉದಾಹರಣೆ ಅಕ್ಕಮಹದೇವಿ ಸ್ತ್ರೀಯರ ಅದ್ಯಾತ್ಮಿಕ ಆಸಕ್ತಿ ಮತ್ತು ವೈಯಕ್ತಿಕ ಸಾಧನೆಗೆ ಸಂದ ಮನ್ನಣೆಗೆ ಅಪೂರ್ವ ಮಾದರಿಯಾಗಿ ಕಂಡು ಬರುವ ಮಹಾದೇವಿಯಕ್ಕ ಹೆಣ್ತನದ ಪಾರಂಪರಿಕ ನಿರ್ವಚನವನ್ನು ಪಲ್ಲಟಗೋಳಿಸಿದ ದಿಮಂತ ಸಾಧಕಿ. ಹೆಣ್ಣನ್ನು ಅಪಮಾನಿಸುತ್ತ ಅವಳ ಬಗ್ಗೆ ಕೀಳು ಭಾವನೆಗಳನ್ನು ಹೊಂದಿದ್ದ ಸಂದರ್ಭಗಳಲ್ಲಿ ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಸ್ವತಂತ್ರ ಸಾಧನೆಯ, ಹೆಣ್ಣಿನ ಪರಮಾರ್ತ ಸಾದನೆಯ, ಒಂದು ಮಹಾ ಪ್ರಕರಣವಾಗಿ ಬೆಳೆದುನಿಂತ ಅಸಾಮಾನ್ಯ ಶಕ್ತಿಯ ಚೇತನವಾಗಿದ್ದಾಳೆ. [೧]

ಮಹಾದೇವಿಯಕ್ಕನ ಜೀವನ ಚರಿತ್ರೆಯು ಲೌಕಿಕ ಸಂಸಾರವೆಂಬ ಹಗೆಗೆ ಬೆಂಗೊಡದೆ ಸಾವಿಲ್ಲದ, ಕೇಡಿಲ್ಲದ, ಎಡೆಯಿಲ್ಲದ, ಕಡೆಯಿಲ್ಲದ, ತೆರಯಿಲ್ಲದ, ಕುರುಹಿಲ್ಲದ, ನಿಸ್ಸಿಮ ಚಲುವ ಚನ್ನಮಲ್ಲಿಕಾರ್ಜುನನಿಗೆ ಮಾರು ಹೋಗಿ ಕಾಯದಲ್ಲಿದ್ದೂ. ನಿಕಾ:ಯಳಾಗಿ ನಿಜಶಕ್ತಿ ತಾನಾದವಳು ಮಹಾದೇವಿಯಕ್ಕ.. “ನಾಮದಲ್ಲಿ ಹೆಂಗೂಸಾದರು ಭಾವಿಸಲು ಗಂಡು ರೂಪಾಗಿ” ಕೆಚ್ಚದೆಯಿಂದ ಸಾಧನೆ ಮಾಡಿದವಳು.

ಅಕ್ಕನ ಜೀವನ ಚರಿತ್ರೆ ಕೂತೂಹಲಕಾರಿಯಾದುದು ಅದನ್ನು ವಿವರವಾಗಿ ನಾವು ಇಲ್ಲಿ ಗಮನಿಸಬಹುದು ಮಹದೇವಿಯಕ್ಕನ ಜೀವನವು ವಿವಿಧ ಕೃತಿಕಾರರಲ್ಲಿ ಅವರವ ಭಾವ, ರಾಗ, ಸಂಸ್ಕಾರಗಳಿಗನುಗುಣವಾಗಿ ವರ್ಣಿಸಲ್ಪಟ್ಟಿದೆ. ಆದರೆ ಈ ಸಾಹಿತ್ಯದ ಬಹುಭಾಗಳೆಲ್ಲಾ ಕಲ್ಪನೆಯ ಅಂಶವೇ ಪ್ರಧಾನವಾಗಿರುವುದು. ಐತಿಹಾಸಿಕ ಚಾರಿತ್ರಿಕ ಸಂಗತಿಗಳಿಗೆ ಧಕ್ಕಬಹುದಾದ ನಂಬಲರ್ಹ ಸಂಗತಿಗಳು ಇಲ್ಲಿ ದುರ್ಬಲವಾಗಿವೆ ಕಾಲದ ದೃಷ್ಟಿಯಿಂದಲೂ ಮಹದೇವಿಯಕ್ಕನ ಜೀವಿತಕಾಲದ ಧೀರ್ಘಾವಧಿಯ ನಂತರ ರಚಿತವಾದ ಅಧುನಿಕ ಸಾಹಿತ್ಯದಲ್ಲಿ ಅದನ್ನು ಆಪೇಕ್ಷಿಸುವುದು ಅಸಾಧ್ಯ, ಆದರೂ ಮಹಾದೇವಿಯಕ್ಕನ ಜೀವನ ಚರಿತ್ರೆಯ ಕೆಲವು ಚಾರಿತ್ರಿಕ ಸಂಗತಿಗಳಿಗಾಗಿ ನಾವು ಹರಿಹರ, ಚಾಮರಸ,

*೧. ಡಾ. ಶಾಂತಾ ಇಮ್ರಾಪೂರ –ಉಡುತಡಿಯಮಹಾದೇವಿಯಕ್ಕ ೨೦೦೫ ಪು.ಸಂ.೧*

ಚನ್ನಬಸವಾಂಕರ, ಕೃತಿಗಳನ್ನು ಮತ್ತು ಶೂನ್ಯ ಸಂಪಾದನೆಗಳನ್ನು ಅವಲಂಬಿಸಬಹುದಾಗಿದೆ.

ಅಕ್ಕನ ಜೀವಿತ ಕಾಲಾವಧಿಗೆ ಬಹು ಹತ್ತಿರದವನಾಗಿ ಬಾಳಿದ ಕವಿ ಹರಿಹರ. ಹರಿಹರನ 'ಉಡುತಡಿಯ ಮಹದೇವಿಯಕ್ಕನ ರಗಳೆ' ಅಕ್ಕನ ಜೀವನ ಕುರಿತಾದ ಸ್ವತಂತ್ರ ಕೃತಿ ಕಾಲದ ದೃಷ್ಟಿಯಿಂದಲೂ ಹರಿಹರನು ಮಹಾದೇವಿಯಕ್ಕಳಿಗೆ ಸಮೀಪದವನಾದುದರಿಂದ ಆತನ ಕೃತಿ ನಂಬಲ ರ್ಹ ಎನ್ನುವ ಒಂದು ಅಭಿಪ್ರಾಯವನ್ನು ಹಲವಾರು ವಿದ್ವಾಂಸರು ಮಂಡಿಸುತ್ತಾರೆ. ಅವುಗಳನ್ನು ಅನುಲಕ್ಷಿಸಿ ಹಾಗೂ ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ ರಾಚಕವಿಯ ಮಹಾದೇವಿಯಕ್ಕನ ಸಾಂಗತ್ಯ ಕೃತಿಗಳನ್ನಿಟ್ಟುಕೊಂಡು ಅಕ್ಕನ ಜೀವನ ಜರಿತ್ರೆಯನ್ನು ಹೀಗೆ ಕಂಡುಕೊಳ್ಳಬಹುದು.

**ಕಾಲ:**

ಮಹಾದೇವಿಯಕ್ಕನ ಕಾಲವು ಖಚಿತವಾಗಿ ತಿಳಿಯದೆ ಹೋದರು ಮಹಾದೇವಿಯಕ್ಕ ೧೨ನೇ ಶತಮನದಲ್ಲಿ ಬಾಳಿ ಬದುಕಿದ ಶಿವಶರಣೆ ಎಂದು ಸಹಜವಾಗಿ ಹೇಳಬಹುದು, ವೈರಾಗ್ಯನಿಧಿ ಅಲ್ಲಮ ಬಕ್ತಿಭಂಡಾರಿ ಬಸವಣ್ಣ ಪರಮಜ್ಞಾನಿ ಚನ್ನಬಸವಣ್ಣ,ಕರ್ಮಯೋಗಿ ಸಿದ್ದರಾಮ, ಮಧುರ ಭಕ್ತಿಯ ಸಾಧಕಿ ಮಹದೇವಿಯಕ್ಕ ಸಮಕಾಲಿನರಾಗಿದ್ದುಕೊಂಡು ೧೨ನೇ ಶತಮನದಲ್ಲಿ ಬಾಳಿ ಸಮಾಜೋಧಾರ್ಮಿಕ ಕ್ರಾಂತಿಯ ರೂವಾರಿಗಳಾಗಿ ಮೆರೆದರು ಎಂಬುವುದು ಎಲ್ಲರೂ ಹೇಳುವ ಮಾತಾಗಿದೆ.

ಮಹಾದೇವಿಯಕ್ಕನ ಬದುಕಿನ ಕಾಲಮಿತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಶವೇ ಇಲ್ಲಾ ಕಾರಣ ಅಕ್ಕ ಶಿವಶರಣರ ಸಮಕಾಲಿನಳಾಗಿ ಬಾಳಿದಳೆನ್ನಲು ಶರರಣರ ವಚನಗಳಲ್ಲಿ ದೊರೆಯುವ ಅಂತರಿಕ ಪ್ರಮಾಣಗಳ ಸಕಲ ಆಧಾರಗಳಿಗೆ ಮಹಾದೇವಿಯಕ್ಕಳಿಗೆ ಬಸವಣ್ಣ, ಪ್ರಭುದೇವ, ಚನ್ನಬಸವಣ್ಣ, ಸಿದ್ದರಾಮ, ಮಡಿವಾಳ ಮಾಚಯ್ಯ, ಇತ್ಯಾದಿ ಶರಣಗಣದಿಂದ ಕೃತಕೃತ್ಯಗಳಾಗಿದ್ದು ಅವರೆಲ್ಲರ ಪ್ರತ್ಯೆಕ್ಷ ಒಡನಾಟದಿಂದ ತನ್ನ ಅನುಭಾವದ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡುದರ ಬಗೆಗಿನ ಆಕೆಯ ಕೃತಜ್ಞತಾ ಭವ ಆಯಾ ಶರಣರನ್ನು ಸ್ತುತಿಸುವ ವಚನಗಳಲ್ಲಿ ವ್ಯಕ್ತವಾದುದು ಗಮನಾರ್ಹ ಅಂತ ವಚನಗಳು ಒಂದು ಉದಾಹರಣೆ.

ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ
ತನ್ನ ಕರುಣ ಭಕ್ತಿಯ ಪ್ರಸಾದವ ಕೊಟ್ಟನು

ಚನ್ನ ಬಸವಣ್ಣನ ತೊತ್ತಿನ ಮಗಳಾದ ಕಾರಣ
ಒಕ್ಕ ಪ್ರಸಾದವ ಕೊಟ್ಟನು,
ಪ್ರಭುದೇವರ ತೊತ್ತಿನ ತೊತ್ತಿನ ಮರು ದೊತ್ತಿನ ಮಗಳಾದ ಕಾರಣ
ಜ್ಞಾನಪ್ರಸಾದವ ಕೊಟ್ಟನು,
ಸಿದ್ದರಾಮಯ್ಯನ ಶಿಶು ಮಗಳಾದ ಕಾರಣ
ಪ್ರಾಣ ಪ್ರಸಾದವ ಸಿದ್ದಿಸಿ ಕೊಟ್ಟನು
ಮಡಿವಾಳಯ್ಯನ ಮನೆಯ ಮಗಳಾದ ಕಾರಣ
ನಿರ್ಮಳ ಪ್ರಸಾದವ ನಿಶ್ಚಯಸಿ ಕೊಟ್ಟನು
ಇಂತಿ ಅಸಂಖ್ಯಾಯತ ಗಣಂಗಳೆಲ್ಲರೂ
ತಮ್ಮ ಕರುಣದ ಕಂದನೆಂದು ತಲೆದಡವಿದ ಕಾರಣ ಚನ್ನ
ಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು

*ಅ.ವ. ಡಾ.ಎಲ್. ಬಸವರಾಜು ೧೯೮*

ಅಕ್ಕನ ಈ ವಚನಗಳ ಪ್ರಭಾವವನ್ನು ಗಮನಿಸದೆ ಆಕೆ ಬಸವಾದಿ ಪ್ರಮಥರ ಪ್ರತ್ಯಕ್ಷ ಒಡನಾಟದಲ್ಲಿ ಕೆಲವು ಅವಧಿಯವರೆಗೆ ಇದ್ದಿರಬೇಕೆನ್ನುವ ಅರ್ಥ ಹೊರಡುವಂತಿದೆ ಇದಕ್ಕೆ ಸಂವಾಧಿಯಾಗಿ ಅಕ್ಕನ ಉನ್ನತ ವ್ಯಕ್ತಿತ್ವವನ್ನು ಮನದುಂಬಿ ಕೊಂಡಾಡಿದ ಬಸವಣ್ಣ, ಪ್ರಭುದೇವ, ಚನ್ನಬಸವಣ್ಣ, ಸಿದ್ದರಾಮ, ಕಿನ್ನರಿ ಬೊಮ್ಮಯ್ಯ, ತುರುಗಾಯಿ ರಾಮಣ್ಣ, ಆದಯ್ಯ, ಮಡಿವಾಳ ಮಾಚಯ್ಯ, ಇತ್ಯಾದಿ ಶರಣರ ವಚನಗಳು ಲಭ್ಯವಿವೆ.

ಕವಿಚರಿತೆಕಾರರ ಅಭಿಪ್ರಾಯದಂತೆ ಅಕ್ಕಳ ಜೀವಿತಾವಧಿಯನ್ನು ಕುರಿತು ಒಂದು ನಿರ್ಧಿಷ್ಟಾವಾದ ನಿರ್ಣಯಕ್ಕೆ ಬರುವುದಾದರೆ ಆಕೆಯು ಕ್ರಿಸ್ತಶಕ ಸುಮಾರು ೧೧೬೦ ರಲ್ಲಿ ಬಾಳಿ ಬದುಕಿದಳೆಂದು ತಿಳಿದು ಬರುತ್ತದೆ. ಈ ಅಭಿಪ್ರಾಯವನ್ನು ಹೆಚ್ಚಿನ ವಿದ್ವಾಂಸರು ಒಪ್ಪಿಕೊಂಡಿರುವದರಿಂದ ಅಕ್ಕನ ಜೀವಿತದ ಉತ್ಕೃಷ್ಟ ಕಾಲಾವಧಿ ಇದೆಯೆಂದು ಸದ್ಯಕ್ಕೆ ಒಪ್ಪಿಕೊಳ್ಳಬಹುದಾಗಿದೆ.

## ಹುಟ್ಟಿದ ಸ್ಥಳ :

ಮಹಾದೇವಿಯಕ್ಕಳನ್ನು ಉಡುತಡಿಯ ಮಹದೇವಿಯಕ್ಕ ಎಂದು ಕರೆಯಲಾಗುತ್ತಿರುವುದು ಗಮನಾರ್ಹ ಸಂಗತಿಯಾಗಿದ್ದು ಹರಿಹರನು ಈ ರೀತಿಯಾಗಿ ಪ್ರಸ್ತಾಪಿಸುತ್ತಾನೆ.

ಉಡುತಡಿಯ ಮಹಾದೇವಿ, –[೧]

ಉಡುತಡಿಯ ಮಹದೇವಿಯಕ್ಕನೆಂಬ ನಾಮವಂ ಧರಿಸಿ, –[೨]

ಅಕ್ಕ ನುಡುತಡಿಯಾ ಮಹಾದೇವಿಯಕ್ಕ –[೩]

ಕವಿ ಚಾಮರಸನ ಉಡುತಡಿಯ ಮಹಾದೇವಿಯಾ ಎಂಬ ಹೇಳಿಕೆಗಳಿಂದ,

ಇಳೆಯೊಳುಡುತಡಿಯೇಂಬ ಪಟ್ಟಣ
ದೊಳಗೆ ವೀರ ಶಿವಾಗಮಿಕ
ನಿರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶಕ್ತಿಯಲಿ
ಚಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ ಸಾತ್ವಿಕ ಗುಣವೆ ರೂಪಾಗಿ –[೪]

ಇನ್ನೂ ಪಿಡುಪರ್ತಿ ಬಸವ ಕವಿಯು ತನ್ನ ಪ್ರಭುಲಿಂಗ ಲೀಲೆಯಲ್ಲಿ ಮತ್ತು ಬಾಲ ಪಾಪಾಂಬಾ ಕವಿಯು ಭೋಧೋಲ್ಲಾಸವೆಂಬ ಕಾವ್ಯದಲ್ಲಿ ಮಹಾದೇವಿಯಕ್ಕನ ಜನ್ಮ ಸ್ಥಳ ಉಡುತಡಿಯೇ ಎಂಬುದನ್ನು ಹೇಳುತ್ತಾರೆ.

ಶಿವಮೊಗ್ಗ ಜಿಲ್ಲೆಯ ಉಡುತಡಿಯೆಂಬ ಗ್ರಾಮವಿದೆ ಆ ಗ್ರಾಮವೆ ಅಕ್ಕಳು ಹುಟ್ಟಿದ ಉಡು ತಡಿಯೆಂದು ಹೇಳುತ್ತಾರೆ ಇದು ಬಳ್ಳಿಗಾವಿಗೆ ಎರಡು ಮೈಲಿ ದೂರದಲ್ಲಿದೆ ಬಳ್ಳಿಗಾವಿಯ ನೆರೆಯಲ್ಲಿರುವ 'ಉಡುಗಣಿ' 'ತಡಗಣಿ' ಪ್ರದೇಶವೆ ಮಹಾದೇವಿಯಕ್ಕನ ಜನ್ಮಸ್ಥಳವಾಗಿವುದು ಸರಿಯೆನಿಸುತ್ತದೆ ಇಂದಿಗೂ ಆ ಭಾಗದಲ್ಲಿ ಶಿವಶರಣಸಂ ಸ್ಮರಣೀಯ ಸ್ಥಳಗಳು ಕಂಡುಬರುತ್ತವೆ ಎಂಬುವದಕ್ಕೆ ಬಳ್ಳಿಗಾವಿ ಹಾಗೂ ಶಿವಪುರಗಳಲ್ಲಿರುವ ಪ್ರಭುದೇವರ ಗುಡಿಗಳನ್ನು ನೆರೆಯ ಅನಿಮಿಷಯ್ಯನ ಕೊಪ್ಪಲದಲ್ಲಿ ಅನಿಮಿಷಯ್ಯನ ಗುಹೆಯನ್ನು ಉದಾಹರಿಸಿ ಕೌಶಿಕನ ಕೋಟೆಯೆಂದು ಅಲ್ಲಿಯ ಜನರು ಇಂದಿಗೂ ತೋರಿಸುತ್ತಿರುವುದನ್ನು ಹೇಳಿ ಮಹಾದೇವಿಯಕ್ಕ ಇದೇ ಉಡುತಡಿಯವಳೆ ಆಗಿರಬೇಕೆಂಬುದನ್ನು ಆರ್.ಸಿ. ಹೀರೇಮಠ ಅವರು ಬಲವಾಗಿ ಅನುಮೋದಿಸುತ್ತಾರೆ.[೫] ಇದನ್ನೆ ನಾವಿಲ್ಲಿ ಒಪ್ಪಿಕೊಳ್ಳಬಹುದಾಗಿದೆ.

*೧. ಎಸ್. ವಿನೋದಬಾಯಿ ಅಂಡಾಳ್ ಮಹದೇವಿ ಮೀರ ಪು.ಸಂ. – ೭೯*

*೨.. ಪಾಲ್ಕುರಿಕೆ ಸೋಮನಾಥ ಪಂದಿತಾರಾಧ್ಯ ಚರಿತೆ ಪು.ಸಂ. – ೮೮*

*೩.. ಘನಮಠ ಶಿವಯೋಗಿ ಪದ –೧೩೯ ಪದ್ಯ – ೭*

*೪. ಸಿದ್ದನಂಜೇಶ ಗುರುರಾಜ ಚರಿತ್ರೆ ಸಂ.–೯ ಪದ್ಯ – ೬೮*

*೫. ಹರಿಹರ ಕವಿ ಮಹಾದೇವಿಯಕ್ಕನ ರಗಳೆ ಸ್ತಲ – ೧ ಪದ್ಯ – ೧*

## ತಂದೆ ತಾಯಿ :

ಸಾಮನ್ಯವಾಗಿ ಮಹಾ ಪುರುಷರ ಜನನ ವಿಚಾರವನ್ನು ಕುರಿತು ಹೇಳುವಾಗಲೆಲ್ಲಾ ಕವಿಗಳು ದೇವರ ಅಂಶವೆ ಭೂಮಿಯಲ್ಲಿ ಆಯಾ ಹೆಸರುಗಳಿಂದ ಜನ್ಮತಾಳುತ್ತವೆಂದು ಹೇಳುವುದು ಸಂಪ್ರದಾಯ, ಅದಕ್ಕೆ ಮಾಹಾದೇವಿಯಕ್ಕನ ಜನ್ಮ ವೃಂತಾತವು ಹೊರತಾಗಿಲ್ಲಾ. ಪಾರ್ವತಿಯ ಸ್ವಾತಿಕ ಕಳೆಯೇ ಭೂಮಿಗೆ ಅವತರಿಸಿತ್ತೆಂದು ಅವಳೇ ಮಹಾದೇವಿಯಕ್ಕಳೆಂದು ಕೆಲವು ಕವಿಗಳ ಅಭಿಪ್ರಾಯ ಮಹಾದೇವಿಯಕ್ಕಳ ತಂದೆ ತಾಯಿಗಳ ಹೆಸರನ್ನು ಪ್ರಥಮವಾಗಿ ಖಚಿತವಾಗಿ ಹೇಳಿದ ಕವಿ ಎಂದರೆ ಚಾಮರಸ ಆದರೆ

ಮಾಹಾದೇವಿಯಕ್ಕಳ ಜೀವನವನ್ನು ಸಾಹಿತ್ಯ ಮಾಧ್ಯಮದಲ್ಲಿ ಸಾಕ್ಷಾತ್ಕರಿಸಿಕೊಂಡ ಪ್ರಥಮ ಕವಿ ಹರಿಹರ, ಆತನ ಮಹಾದೇವಿಯಕ್ಕಳ ರಗಳೆಯಲ್ಲಿ ಮಹಾದೇವಿಯಕ್ಕಳ ತಂದೆ ತಾಯಿಯರನ್ನು ಶಿವಭಕ್ತ, ಶಿವಭಕ್ತೆ ಎಂದು ಸಾಂಕೇತಿಕವಾಗಿ ಸೂಚಿಸಿದ್ದಾನೆ. ಚಾಮರಸ ಚನ್ನಬಸವಾಂಕ ಮತ್ತು ಎಳಂದೂರು ಹರಿಶ್ವರ ಕವಿಗಳ ಪ್ರಕಾರ ನಿರ್ಮಲಶೆಟ್ಟಿ ಮತ್ತು ಸುಮತಿಯರು, ಮಹಾದೇವಿಯ ತಂದೆ-ತಾಯಿಯರು ಪಿಡುಪರ್ತಿ ಬಸವ ಮತ್ತು ಬಾಲಪಾಪಾಂಬ ಇವರ ಪ್ರಕಾರ ವಿಮಲ ಮತ್ತು ಕುಟಿಲಾಲ, ರಾಚಕವಿಯ ಪ್ರಕರ ಓಂಕಾರಶಟ್ಟಿ ಮತ್ತು ಲಿಂಗಮ್ಮ ಎಂಬುದಾಗಿ ಅವಳ ತಾಯಿ ತಂದೆಗಳ ಬಗೆಗೆ ತಿಳಿದುಬರುತ್ತವೆ. ಈ ಎಲ್ಲವುಗಳಲ್ಲಿ ಯಾವುದು ನಿಜ? ಎಂದು ಹೇಳುವುದು ಕಷ್ಟ.
ಅಕ್ಕ ಮಹಾದೇವಿ ಉಡುತಡಿಯೆಂಬ ಗ್ರಾಮದಲ್ಲಿ ಪರಮ ಸುಜ್ಞಾನಿಗಳು ಶಿವಾಚಾರ್ಯ ಸಂಪನ್ನರು ಆದ ನಿರ್ಮಲಶೆಟ್ಟಿ ಸುಮತಿಯರಿಗೆ ಮಗಳಾಗಿ ಸ್ತ್ರೀ ಕುಲಕ್ಕೆ ಬೆಳಕಾಗಿ ಹುಟ್ಟಿದಳು. ಎಂಬುದನ್ನು ಬಹು ಜನ ವಿದ್ವಾಂಸರು ಒಪ್ಪುತ್ತಾರೆ.

## ಗುರುದೀಕ್ಷೆ :

ಹಲವಾರು ಸಂಸ್ಕಾರಗಳಲ್ಲಿ ದೀಕ್ಷಾ ಸಂಸ್ಕಾರವು ಅತೀ ಪ್ರಮುಖವಾದ ಪ್ರಸಂಗ ಕೇವಲ ಮಾನವನಿಗಲ್ಲದೆ ಇತರೆ ಜೀವರಾಶಿಗಳಿಗೂ ದೀಕ್ಷೆಯು ನೀಡುವುದು ಒಂದು ಸಂಪ್ರದಾಯ, ಅಕ್ಕಮಹಾದೇವಿಯ ದೀಕ್ಷಾಗುರು ಶ್ರೀ ಗುರುಲಿಂಗ ದೇವರು, ತಮ್ಮ ಕರಸ್ಥಲದಲ್ಲಿ ಇರಿಸಿ ಪೂಜಿಸಿ ಚಿತ್ತರಳೆಯ ತುಂಬಿದ ಇಷ್ಟಲಿಂಗವನ್ನು ಅಕ್ಕನ ಕರಸ್ಥಲಕ್ಕೆಕೊಟ್ಟು ಅಲ್ಲಿಂದ ಒಂದೊಂದು ಹಂತಗಳನ್ನು ಏರಿ ದಿವ್ಯಾನುಭವದ ಆರೋಹಣ ಕ್ರಮದಲ್ಲಿ ತಂದು ನಿಲ್ಲಿಸುತ್ತಾನೆ. ಇದಕ್ಕೆ ಅಕ್ಕನ ವಚನವೊಂದು ಸಾಕ್ಷಿಯಾಗಿದೆ. ತನ್ನ ಗುರುವಿನ ಕುರಿತ ಈ ವಚನ ಹಿಗಿದೆ ಶ್ರೀ ಗುರುಲಿಂಗ ದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಂತೆ ಎನ್ನ ಭವಂ ನಾಸ್ತಿಯಾಯಿತು, ಎನ್ನ ತನ್ನಂತೆ ಮಾಡಿರ್ದ ಎಂದು ಅಕ್ಕಮಹಾದೇವಿಯು ಹೇಳುವುದರಿಂದ ಅವಳ ಗುರು ಈತನು ಎನ್ನಬಹುದು.

## ವಿವಾಹ :

ಮಾದೇವಿಯಕ್ಕಳ ಜೀವನದ ಮುಖ್ಯ ಘಟನೆಯೆಂದರೆ ಆಕೆಯ ವಿವಾಹ ಪ್ರಸಂಗ, ರಾಜನಾದ ಕೌಶಿಕನ ವ್ಯಾಮೋಹಕ್ಕೆ ಆಕೆ ಗುರಿಯಾದುದು. ಈ ಕೌಶಿಕ ಯಾರು? ಎಂಬುದು ಸ್ಪಷ್ಟವಾಗಿಲ್ಲ ಈ ಬಗೆಯ ಹೆಸರು ಅಂದು ಪ್ರಚಾರದಲಿರಲಿಲ್ಲವಾಗಿ ಇದನ್ನು ನಾವು ಕಲ್ಪಿತ ನಾಮವೆಂದು ಇಟ್ಟು ಕೊಳ್ಳಬಹುದಾದರು ಇಂಥ ಒಂದು ಘಟನೆ ಅವಳ ಜೀವನದಲ್ಲಿ ಸಂಭವಿಸಿರುವುದು ಸತ್ಯವೆಂದು ತೋರುತ್ತದೆ ಇದ್ದನ್ನು ಪೋಷಿಸುವ ಧ್ವನಿಗಳು ಅವಳ ವಚನಗಳಲ್ಲಿ ಕೇಳಿಸುತ್ತವೆ.

"ಪುರದ ಕೇರಿಗಳ ಕರುಮಾಡಮಂ ನೋಡುತಂ
ನೆರೆದ ಪರಿಜನಕೆ ಸಂತೋಷಮಮಂ ನೀಡುತಂ॥
ಬರವರಲು ಮುಂದೆ ಮಹಾದೇವಿಯಾ ಒಪ್ಪುತಿರ್ದ್ದ
ಳರಕೆ ಸರ್ವಾಂಗ ಸೌಂದರ್ಯನಿಧಿ ಕುಳಿರ್ದ
ಳೆಮ್ಮ ಭಕ್ತರ ಭಾಗ್ಯ ವಾರಿಧಿಯೊಪ್ಪ ತಿರೆ
ಅಮ್ಮಮ್ಮ ಸಮ್ಮೋಹನಾಸ್ತ್ರಂತೆಸೆವುತಿರೆ॥
ನೋಡಿದಂ ಕೌಶಿಕನೃಪಂ ನಿಂದನಾರಿಯಂ
ತೀಡಿದಂ ಪುಷ್ಪಚಾಪಂ ಭಿಲ್ಲನಾರಿಯಂ॥ ೧

ಯೌವನ ಮದೋನ್ಮತ ವಿಳಾಸ ವಿಭ್ರಮ ಕಳಾ ಪರಿಪೂರ್ಣ ಶರೀರೆಯಾಗಿರ್ದುಡುತಡಿಯ ಮಹಾದೇವಿಯಕ್ಕಳು ವಸಂತ ಮಾಸದೊಳೊಂದು ದಿನ, ನಿಸ್ಸಾಳದ ಧ್ವನಿ ಕೇಳಿಬಂತು ಸೇನಾ ಸಮೇತ ಮೈಹಾಳಿಯಿಂದ ಬರುತ್ತಿದ್ದ ಕೌಶಿಕನು ಮಹಾದೇವಿಯಕ್ಕಳನ್ನು ನೋಡುತ್ತಾನೆ ಎವೆಯಕ್ಕದುಸಿರಿಕ್ಕದತಿ ಕಾಮಿ ನೋಡುತಿರೆ ಅರಸನ ಮನಮಂ ಕೊಂಡು ಪೊಪಂತೆ ಅಕ್ಕ ಮಹಾದೇವಿ ಒಳಗೆ ಹೋಗುತ್ತಾಳೆ. ಎನ್ನುತ್ತಾನೆ ಹರಿಹರ ಕವಿ. ೨

ಮುಂದೆ ಕೌಶಿಕ ತನ್ನ ಸೇವಕರನ್ನು ಕರೆಯಿಸಿ ಮಹಾದೇವಿಯಕ್ಕಳ ತಂದೆ ತಾಯಿಗೆ ಮಹಾದೇವಿಯನ್ನು ವಿವಾಹವಾಗುವ ಸಂದೇಶವನ್ನು ತಲುಪಿಸುತ್ತಾನೆ. ಮಹಾದೇವಿಯನ್ನು ತಂದೆ ತಾಯಿಯರು ಮದುವೆಗೆ ಒಪ್ಪುವಂತೆ ಒತ್ತಾಯಿಸುವರು ಆದರೆ ಅಕ್ಕಳು ಸಾಕ್ಷಾತ್ ಶಿವನನ್ನೆ ತನ್ನ ಮನದಲ್ಲಿರಿಸಿ ಅವನನ್ನೆ ಪತಿಯೆಂದು ಸ್ವೀಕರಿಸಿದ ಅಕ್ಕ ಬಂದ ಸೇವಕರನ್ನು ಹೋಗುವಂತೆ ಅಪ್ಪಣೆ ಮಾಡುವಳು, ಮುಂದೆ ಅರಸನ ಕಠೋರ ಆಜ್ಞೆ ತಂದೆ ತಾಯಿಯರ ಆಜ್ಞೆಗೆ ಅನವರ್ತಿಯಾಗಿ ಕೌಶಿಕನೊಂದಿಗೆ ಮೂರು ಶರತ್ತು(ವಚನ)ಗಳನ್ನು

*೧. ಇದು ಕಲ್ಬುರ್ಗಿ ಜಿಲ್ಲೆಯ ಮಹಾಗಾಂವ ಎಂಬ ಅಭಿಪ್ರಾಯವೊ ಇದೆ.*

*೨. ಮಹಾದೇವಿಯಕ್ಕನ ವಚನಗಳು ಪ್ರಸ್ತಾವನೆ, ಪು.ಸಂ. ೫*

ನೀಡಿ ಒಪ್ಪಿ ನಡೆಯುವುದಾದರೆ, ನಾನು ನಿನೊಂದಿಗೆ ವಿವಾಹ ವಾಗುವೆ ಎಂದು ಒಪ್ಪುವಳು,

ಕೌಶಿಕನು ಮುಂದೆ ಅಕ್ಕಳ ಷರತ್ತಿಗೆ ವ್ಯತಿರಿಕ್ತವಾಗಿ ನಡೆದುಕೊಂಡ ಕಾರಣ ಅವಳು ಅರಮನೆಯನ್ನು ತೊರೆದು ಚನ್ನಮಲ್ಲಿಕಾರ್ಜುನನ ಮೋಹಿತೆಯಾಗಿ ಹೊರಟಳು. ಈ ಸಂದರ್ಭದಲ್ಲಿ ಅವಳು ದಿಗಂಬರೆಯಾಗಿ ಹೊರಟಳೆಂದು ಕವಿಗಳು ಬರದಿರುವುದನ್ನು ಮುಂದಿನವರು ತಲೆಗೂದಲಿಂನಿಂದಲೇ ಮೈಮುಚ್ಚಿಕೊಂಡಳೆಂದು ಬಾವಿಸುತ್ತ ಬಂದಳೆಂದು, ಇಲ್ಲಿ ಕೇಶಾಂಬರವೆಂದರೆ ಕೂದಲಿನ ಬಟ್ಟೆ(ಕಂಬಳ) ಎಂದೆ ಅರ್ಥವಿದೆ ಎಂದು ಹಲವಾರು ವಿದ್ವಾಂಸರು ಹೇಳುತ್ತಿರುವುದು ನಾವು ಗಮನಿಸಬಹುದು.

## ಕಲ್ಯಾಣದಡೆಗೆ ಅಕ್ಕ :

ಮಹಾದೇವಿಯಕ್ಕ ಜೀವನದಲ್ಲಿಯೇ ಅತ್ಯಂತ ಮಹತ್ವದಾಗಿರುವ ಕಲ್ಯಾಣ ಪಟ್ಟಣಕ್ಕೆ ಹೋಗುವುದಾಗಲಿ ಅನುಭವ ಪಂಟಪ ಪ್ರವೇಶಿಸುವದಾಗಲಿ ಅಸಂಖ್ಯಾತ ಶರಣರೊಡಗೂಡಿ ಕೆಲ ಕಾಲ ಕಳೆಯುವುದಾಗಲಿ ಪ್ರಭುದೇವರ ಪರೀಕ್ಷಣೆಗೆ ಗುರಿಯಾದುದನ್ನಾಗಲಿ ಹರಿಹರ ತನ್ನ ರಗಳೆಯಲ್ಲಿ ಹೇಳುವುದೇ ಇಲ್ಲ ಅವಳ ಜೀವನಕ್ಕೆ ಕಳಶಪ್ರಾಯವಾದ ಈ ಅಂಶಗಳನ್ನು ಯಾಕೆ ಹೇಳಲ್ಲ ಎಂಬುದು ಆಶರ್ಯ ಸಂಗತಿ. ಮಹಾದೇವಿಯಕ್ಕಳು ಕಲ್ಯಾಣವನ್ನು ಪರವೇಶಿಸುವಂತೆ ಮೊದಲಿಗೆ ಕಿನ್ನರಿ ಬೊಮ್ಮಯ್ಯನಿಂದ ಪರೀಕ್ಷೇಗೊಳಗಾಗುವ ಪ್ರಸಂಗ ನಡೆದಿದ್ದನ್ನು ಶೂನ್ಯ ಸಂಪಾದನೆಗಳೂ ತಿಳಿಸುತ್ತವೆ.

> 'ಕಾಯದಲ್ಲಿ ಕಳವಳವಿರಲು ಪ್ರಾಣದಲ್ಲಿ ಮಾಯೆಯಿರಲು
> ಏತರ ಮನ ? ಇದೇತರ ನಿರ್ವಾಣ ?
> ಮಹಾಲಿಂಗ ತ್ರಿಪುರಾಂತಕನು ನಿನ ಸಂಸರಿಯೆಂಬನಲ್ಲದೆ
> ಸಜ್ಜನೆಯೆಂದು ಕೈಪಿಡಿವನಲ್ಲ ಕೇಳಾ ಮರುಳೆ'೧

ಎಂದು ನುಡಿದು ಭಕ್ತಿಭಾವದಿಂದ ಅವಳ ಸರ್ವಾಂಗಗಳನ್ನೆಲ್ಲ ಪರೀಕ್ಷಿಸಿ ನೋಡಿದಾಗ ಅಂತರಂಗದ ಜ್ಞಾನಾಗ್ನಿಯಿಂದ ಕಾಮನನ್ನು ಮೆಟ್ಟಿ ನಿಃಕಾಮಿಯಾದ ಅಕ್ಕನ ಘನೆತೆಯು ತೋರುತ್ತದೆ. ಕಿನ್ನರಿ ಬೊಮ್ಮಯ್ಯನು ಮಹಾದೇವಿಯಕ್ಕಳ ದಿಗಂಬರ ವೇಷವನ್ನು ಕಂಡು ಈಕೆ ಲಿಂಗಾನುಭವ ಸಂಪನ್ನೆಯಾದರೆ ಗುರುತಾಯಿಯೆಂದು ಶರಣೆಂದೆನು, ಅಲ್ಲದೆ ಲಜ್ಜಾಭಿಮಾನವುಳ್ಳಡೆ ಸ್ತ್ರೀಯಾಗಿ ಕೈವಿಡಿವೆನು, ಎಂದು ಅವಳ ಪರೀಕ್ಷೆಗೆ ತೊಡಗತ್ತಾನೆ. ೨

*೧. ಅಕ. ವ.ಸಂ. ಎಲ್. ಬಸವರಾಜು – ವ. ೪೧*

*೨. ಅಕ್ಕನ ಪ್ರವಚನ ಲಿಂಗಾನಂದಸ್ವಾಮಿ – ಪು.ಸಂ. ೧೧೮*

ಚನ್ನಮಲ್ಲಿಕಾರ್ಜುನ ನಲ್ಲದೇ ಮಿಕ್ಕಿಹ ಪುರುಷರೆಲ್ಲರು ಎನಗೆ ಸಹೋದರರು : ಎಂದು ಹೇಳಿದರೂ ಕಿನ್ನರಿ ಬೊಮ್ಮಯ್ಯನು "ಬರಿಯ ಮಾತಿನ ಬಿನ್ನಣೆ ಪ್ರಸರಿಸೆ ನಾನು ಬಿಡುವನೆ" ಎಂದು ಅವಳನ್ನು ತುಡುಕಿ ಹಿಡಿಯಲುಹೋಗುವನು, ಅವಳ ಸರ್ವಾಂಗ ಶಿವತತ್ವಮಯವಾಗಿರುವುದನ್ನು ಕಂಡು ಬೆಚ್ಚುತ್ತಾನೆ, ಪಶ್ಚಾತಾಪ ಪಡುತ್ತಾನೆ. ಆಗ ಬೊಮ್ಮಯ್ಯನು ಕುರಿತು ಪ್ರತಿ ಉತ್ತರಿಸಿದ

'ಎಲೆ ಅಣ್ಣಾ ಎಲೆ ಅಣ್ಣಾ ನೀವು ಮರುಳರಲ್ಲಾ'
ಅಣ್ಣಾ ಎನ್ನ ನಿನ್ನಳವೆ ?೯

ಹೀಗೆ ಮಹಾದೇವಿಯಕ್ಕಳ ಘನತೆಯನ್ನು ಭವ್ಯ ಭಕ್ತಿಯ ಭಾವ ಕಂಡು ಪ್ರಭಾವಿತನಾಗಿ ಕಿನ್ನರಿ ಬೊಮ್ಮಯ್ಯ ಮೆಚ್ಚಿ ಕೊಂಡಾಡುತ್ತಾನೆ. ಮುಂದೆ ಅನುಭವ ಮಂಟಪದಲ್ಲಿ ಅಲ್ಲಮ ಪ್ರಭುದೇವರಿಂದ ಪರೀಕ್ಷೆಗೊಳಗಾಗುತ್ತಾಳೆ.

## ಅಲ್ಲಮ ಪ್ರಭುದೇವರು :

"ಸತಿಯೆಂದರೆ ಮುನಿಯುವರು ನಮ್ಮ ಶರಣರು, ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು ಇಲ್ಲದಿದ್ದರೆ ತೊಲಗು ತಾಯೆ" ಎಂದು ಪ್ರಶ್ನಿಸುವಂತೆ, ಮಹಾದೇವಿಯಕ್ಕಳು ಅದ್ಭುತವಾದ ಉತ್ತರೆ ನೀಡಿದಳು 'ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೆ' ಎಂದು ತನ್ನ ಪತಿಯ ಕುರುಹನ್ನು ಹೇಳುತ್ತಾಳೆ ಶರಣರ ಮೆಚ್ಚಿಗೆಗೆ ಪಾತ್ರಳಾಗುತ್ತಾಳೆ.

ಹೀಗೆ ಮಹಾದೇವಿಯಕ್ಕಳು ಕಾಮಿಯಾಗಿ, ನಿಃಕಾಮಿಯಾದಳು, ಸೀಮೆಯಲ್ಲಿದ್ದು, ನಿಸ್ಸಿಮೆಯಾದಳು, ಭವಿಯ ಸಂಗ ತೊರೆದು ಭವ ಬಾಧೆಯ ಹರಿದಳು, ಎಂದು ಅಕ್ಕಳನ್ನು ಶರಣರು ಸ್ತುತಿಸುತ್ತಾರೆ. ಅನುಭವ ಮಂಟಪದಲ್ಲಿ ಅವಳಿಗೆ ಹಿರಿಯ ಸ್ಥಾನಕೊಟ್ಟು ಗೌರವಿಸುತ್ತಾರೆ. ಆಗ ಅನುಭಾವಿಗಳ ಸಂಗದಲ್ಲಿದ್ದು ಪರಮ ಸುಖಿಯಾದೆನೆಂದು ಭಾವಿಸಿಕೊಳ್ಳುತ್ತಾಳೆ, ಚನ್ನಮಲ್ಲಿಕಾರ್ಜುನನಲ್ಲಿ ಬೆರೆತು ಬಯಲಾಗಬೇಕೆಂಬ ಭಾವ ಬರುತ್ತದೆ. ತಾನು ಲಿಂಗೈಕ್ಯವಾಗುವ ಕುರಿತು ಪ್ರಭುದೇವರಿಂದ ಅರಿತು ಮಹಾ ಪರ್ವತದಾದ ಶ್ರೀಶೈಲ ಗಿರಿಯಡೆ ತನ್ನ ಪ್ರಯಾಣ ಬೆಳೆಸಿದಳು ಎಂಬುದನ್ನು ನಾವು ಇಲ್ಲಿ ಕಾಣುತ್ತೇವೆ.

*೯. ಎಂ ಚಿದಾನಂದ ಮೂರ್ತಿ ಶೂನ್ಯ ಸಂಪಾದನೆ ಕುರಿತು – ಪು.ಸಂ. ೯೫*

## ಲಿಂಗೈಕ್ಯ :

ಮಹಾದೇವಿಯಕ್ಕಳು ಕಲ್ಯಾಣ ಶರಣರಿಂದ ಅನುಭವವನ್ನು ಪಡೆದು ಅಲ್ಲಮ ಪ್ರಭುದೇವರ  ನಿದರ್ಶನವಂತೆ ಶ್ರೀಶೈಲ ಪರ್ವತದ ಕಡೆಗೆ ಹೊರಟು ತನ್ನೊಡೆಯನಾದ ಚನ್ನಮಲ್ಲಿಕಾರ್ಜುನನಲ್ಲಿ ಒಂದಾಗಲು ಹಲುಬಿದಳು.

ಶ್ರೀ ಗಿರಿಯ ಪರ್ವತದ ಕದಳಿಯ ಬನವನ್ನು ಪ್ರವೇಶಿಸಿ ಅಲ್ಲಿರುವ ಸೃಷ್ಟಿಯ ಸೌಂದರ್ಯ ಕಂಡು ಅಕ್ಕಳು ತನ್ನೊಡೆಯ ಚನ್ನಮಲ್ಲಿಕಾರ್ಜುನನನ್ನು ಹರ್ಷಿಸಿ ಕರೆಯುವ ಭಕ್ತಿಯ ಕೂಗು ಬಹು
ಮಾರ್ಮಿಕವಾಗಿದೆ ಕದಳಿಯ ಬನದಲ್ಲಿರುವ ಗಿಡ, ಮರ, ಕಲ್ಲು,ನದಿ,ಪಕ್ಷಿ ಪ್ರಾಣಿ ಸಂಕುಲಗಳಲ್ಲಿ
ಚನ್ನಮಲ್ಲಿಕಾರ್ಜುನನ ದಿವ್ಯ ರೂಪವು ಕಂಡು ಆನಂದಿಸಿ ಮುಂದೆ ಸಾಗುತ್ತಾಳೆ.

ಶ್ರೀ ಗಿರಿಯನ್ನೇರುವುದಕ್ಕೆ ಪ್ರಾರಂಭಿಸಿದ ಅಕ್ಕನಿಗೆ ಸರ್ವವು ಚನ್ನಮಲ್ಲಿಕಾರ್ಜುನ ಮಯವಾಗಿ ಕಂಡು ಬರುತ್ತದೆ. "ವನವೆಲ್ಲ ನೀವೆ, ವನದೊಳಗಣ ದೇವತರು ಎಲ್ಲ ನೀವೆ, ತರುವಿನೊಳಗೂಡುವ ಖಗಮೃಗವೆಲ್ಲ ನೀವೆ, ಚನ್ನಮಲ್ಲಿಕಾರ್ಜುನ ಸರ್ವ ಭರಿತನಾಗಿ ಎನಗೆ ಮುಖದೊರಾ" ಎಂದು ಗೋಗರೆಯುತ್ತ ಕದಳಿಯ ಬನವನ್ನು ಪ್ರವೇಶಿಸುತ್ತಾಳೆ. ಯಾರಿಗಾಗಿ ಅಜನ್ಮ ತಪಗೈದ್ದಿದ್ದಾಳೋ ಆ ಭವ್ಯ ಸ್ವರೂಪದ ಚಿತ್ಕಳೆ ಮೈದೂರುತ್ತದೆ.

ಅಗೋಚರವಾದ ಅಗಮ್ಯ ಸ್ವರೂಪಿ ಜಗದಾದಿ ಶಕ್ತಿಯೊಳಗೆ ಬೆರೆಸಿ ಮಾತನಾಡುವ ಪರಮ ಗುರು ಚನ್ನಮಲ್ಲಿಕಾರ್ಜುನನ ನಿಲುವ ಕಂಡು ಬದುಕಿದೆನೆಂದು ಹಾಡಿ ತಣಿಯುತ್ತಾಳೆ. ಕದಳಿಯ ಬನದಲ್ಲಿ ಬವಹರನ ಕಂಡು ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು ಎಂದು ನಿಜೈಕ್ಯವನ್ನೈದುತ್ತಾಳೆ.

# ಅಧ್ಯಾಯ- ಮೂರು

# ಪೂರ್ವಕಾಲದ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ಸಸ್ಯ, ಪ್ರಾಣಿ ಮತ್ತು ಪಕ್ಷಿ ಸಂಕುಲಗಳ ಉಲ್ಲೇಖ

# ಪೂರ್ವ ಕಾಲದ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ಸಸ್ಯ, ಪ್ರಾಣಿ ಮತ್ತು ಪಕ್ಷಿ ಸಂಕುಲಗಳ ಉಲ್ಲೇಖ

## ಕನ್ನಡ ಸಾಹಿತ್ಯದ ಆರಂಭ ಕಾಲ :

ಕನ್ನಡ ಸಾಹಿತ್ಯ ಸಂಸ್ಕೃತಿಯ ಒಂದು ಅಂಗವಾಗಿದೆ, ಕನ್ನಡ ಸಾಹಿತ್ಯದಲ್ಲಿ ಮೂಡಿ ಬಂದಿರುವ ಪ್ರಕೃತಿಯ ಚಿತ್ರಣ, ಅದ್ಭುತವಾಗಿದೆ, ಕನ್ನಡ ನಾಡಿನ ಗಿರಿ, ವನ, ಬಳ್ಳಿ, ಸಸ್ಯ ಪ್ರಾಣೀ, ಪಕ್ಷಿಗಳ ಸಂಸ್ಕೃತಿಯು ಅದ್ಭುತವಾಗಿ ಮೂಡಿ ಬಂದಿದೆ, ಅಲ್ಲದೆ ಕನ್ನಡಿಗರ ಮನದಾಳದಲ್ಲಿರುವ ಸುಂದರ ಸಂಸ್ಕೃತಿ, ಅವರ ಪರಿಶುದ್ಧ ನಡೆ ನುಡಿ, ವೀರ, ಶೌರ್ಯ ಸಾಹಸವನ್ನು ಕ್ರಿ.ಶ. ೪೮೦ ರಲ್ಲಿ ದೊರಕಿದ ನಿರಗುಂದ ಶಾಸನ ಕ್ರಿ.ಶ. ೫೭೮ರಲ್ಲಿ ರಚಿತವಾದ ಬಾದಾಮಿ ಚಾಲುಕ್ಯರ ಮಂಗಳೇಶನ ಶಾಸನದಲ್ಲಿ ಪೂರ್ವದ ಹಳಗನ್ನಡ ಭಾಷ ಬಳಕೆ ಇದೆ ಕ್ರಿ.ಶ. ೭ನೇ ಶತಮಾನದಲ್ಲಿ ರಚಿತವಾದ ಬಾದಾಮಿ ಶಾಸನದಲ್ಲಿ ಕಪ್ಪೆ ಆರೆಭಟ್ಟನ ಸ್ವಭಾವದ ಚಿತ್ರಣವಾಗಿದೆ. ಅಲ್ಲಿ 'ಮಧುರ್ಕ್ಯಂಗೆ ಮಾಧುರ್ಯಂ'ಎಂಬ ವಾಕ್ಯವಿದೆ ಎಂದರೆ ಮಾಧ್ಯುರ್ಯತೆಯನ್ನು ಪ್ರಕೃತಿಯಲ್ಲಿ ಕಾಣಬಹುದು.

## ಕವಿರಾಜ ಮಾರ್ಗ :

ಇದು ಕನ್ನಡದ ಮೊದಲನೆಯ ಉಪಲ್ಬದ ಕೃತಿ ಲಾಕ್ಷಣಿಕ ಗ್ರಂಥವಾಗಿರುವ ಇದರಲ್ಲಿ, ಕಾವೇರಿ, ಗೋದಾವರಿ ನದಿಗಳ ಎಲ್ಲೇಖ, ಕನ್ನಡನಾಡಿನ ವರ್ಣಣೆಯಾಗಿದೆ. ಕವಿರಾಜಮಾರ್ಗ ಕೃತಿಯ ಕರ್ತೃ ಶ್ರೀ ವಿಜಯ, ಈತನು ರಾಷ್ಟ್ರಕೂಟರ ದೊರೆ ನೃಪತುಂಗನ ಆಸ್ಥಾನದ ಕವಿಯಾಗಿ ಕನ್ನಡ ಸಾಹಿತ್ಯ, ಸಂಸ್ಕೃತಿ, ಪರಿಸರ, ಭಾಷೆ, ನಾಡಿನ ವಿಸ್ತಾರತೆಯ ಕುರಿತು ತನ್ನ ಕೃತಿಯೊಂದರಲ್ಲಿ ವಿವರಣೆ ನೀಡಿದ್ದಾನೆ.

ಕಾವೇರಿಯಿಂದಮಾ ಗೋದಾವರಿಮಿರ್ಪ ನಾಡದ
ಕನ್ನಡದೊಳ್ ಬಾವಿಸಿದ ಜನಪದಂ - - - - ೧

## ವಡ್ಡರಾಧನೆ :

'ವಡ್ಡರಾಧನೆ' ಕೃತಿಯು ಕನ್ನಡದ ಮೊಟ್ಟ ಮೊದಲ ಗದ್ಯ ಗ್ರಂಥ ಶಿವಕೊಟ್ಯಾಚಾರ್ಯರು, ಇದರ ಕರ್ತೃ, ಇಲ್ಲಿ ಹತ್ತೊಂಬತ್ತು ಜೈನ "ಮಹಾಪುರುಷರ"

೧ ಕ.ಸಾ.ಚ.- ರಂ.ಶ್ರೀ. ಮುಗಳಿ ಪು. ಸಂ. - ೨೮

ಕಥೆಗಳನ್ನು ಹೇಳಲಾಗಿದೆ, ಈ ಕಥೆಗಳಲ್ಲಿ ಧರ್ಮಿಕ ಕಥೆಗಳಾಗಿದ್ದು, ಇವುಗಳ ನಾಯಕರೆಲ್ಲ ಧರ್ಮವೀರರು, ಕೆಲವರು ಮೋಕ್ಷವನ್ನು ಸಂಪಾದಿಸಿಕೊಳ್ಳುತ್ತಾರೆ. ಕೆಲವರು ಮೋಕ್ಷಕೆ ನೆರಮನೆಯಾದ ಸಮರ್ಥ ಸಿದ್ದಿಯೆಂಬ ಸ್ವರ್ಗಕ್ಕೆ ಹೋಗುತ್ತಾರೆ. ತಪಸ್ಸಿನಲ್ಲಿ ಕುಳಿತಿರುವ ಎತಿಗೆ ದೇವತೆ, ಮನುಷ್ಯ, ಪ್ರಾಣಿ, ಪಕ್ಷಿ, ಜಡವಸ್ತು–ಇವುಗಳಿಂದ ನಾನಾ ಬಗೆಯಾದ ತೊಂದರೆಗಳು ಆಗುತ್ತವೆ. ಇವುಗಳಿಗೆ ಉಪಸರ್ಗ ಎಂದು ಹೆಸರು. ಉಪಸರ್ಗವನ್ನು ಜಯಿಸುವುದು ತಪ್ಪಸ್ಸಿಗೆ ಸಹಕಾರಿ, ಅಲ್ಲದೆ ಹಸಿವು, ನಿರಡಿಕೆ, ಶೀತವಾತ, ಮುಂತಾದ ಬಾಧೆಗಳನ್ನು ಯತಿ ಸೈರಿಸಿಕೊಳ್ಳಬೇಕು ಇವುಗಳಿಗೆ ಪರೀಕ್ಷೆ ಎಂದು ಹೆಸರು, [೨]

ಈ ರೀತಿಯಾಗಿ ವಡ್ಡರಾಧನೆಯ ೧೯ ಕಥೆಗಳು ಪ್ರಕೃತಿಯ ಪ್ರಾಣಿ, ಪಕ್ಷಿ, ಬೆಂಕಿ, ವಾಯು, ಸಿಡಿಲು, ಇತ್ಯಾದಿ ಪ್ರಕೃತಿದತ್ತವಾದ ಶಕ್ತಿಗಳನ್ನು ಕಥೆಯಲ್ಲಿ ಒಡಮೂಡಿಸಿ ಕೊಂಡಿವೆ.

## ಅವಂತಿ ಕುಮಾರನ ಕಥೆ :

ಉಜ್ಜೈನಿಯ ಅವಂತಿ ಸುಕುಮಾರನು ನಳಿನಿ ವಿಮಾನವೆಂಬ ಸ್ವರ್ಗದ ವ್ಯವರ್ಣನೆಯನ್ನು ಕೇಳಿ ಜಾತಿಸ್ಮರನಾಗಿ ಸನ್ಯಾಸ ಗ್ರಣಮಾಡಿ ಶ್ಮಶಾನದ ಏಕಾಂತ ಪ್ರದೇಶದಲ್ಲಿದ್ದ ಬಿದುರು ಮನೆಯ ಕೆಳಗೆ ತಪಸ್ಸಿನಲ್ಲಿ ಕುಳಿತು ಕೊಂಡಾಗ **ನರಿಯೊಂದು** ಬಂದು ಅವನ ದೇಹ ಮೂರು ದಿವಸಗಳವರೆಗೆ ಅತ್ತ ಇತ್ತ ಎಳೆದಾಡಿ ಅವನನ್ನು ತಿಂದುಬಿಟ್ಟತು. ಈ ನೋವನೆಲ್ಲ ಅವನು ಸೈರಿಸಿ ಸದ್ಗತಿಗೆ ಪ್ರಾಪ್ತನಾಗುತ್ತಾನೆ, ಅವನು ಸತ್ತ ಎಡೆಯಲ್ಲಿ ದೇವತೆಗಳು ಸುರಿದ ಮಳೆಯಿಂದ ಸುವಾಸನೆಯುಕ್ತವಾದ ಗಂಧವತಿಯೆಂಬ ಕೊಳವುಂಟಾಯಿತು. ಮೇಲಿನ ಕಥೆಯಲ್ಲಿ ಪ್ರಾಣಿಯ ಸಂಕೇತ ಬಳಸಿಕೊಂಡಿರುವುದು ಕಾಣುತ್ತದೆ 'ನರಿಯೊಂದರ' ಸಂಸ್ಕೃತಿಕ ಚಿತ್ರ, ಹಾಗೂ ಮಳೆಯ ಪರಿಣಾಮ, ಕೊಳದ ಪರಿಚಯ ಇಲ್ಲೆಲ್ಲ ಸಾಂಕೇತಿಕವಾಗಿದ್ದು ಅವುಗಳನ್ನು ಕೃತಿಕಾರನು ಭವಾವಳಿಯ ಸಂದರ್ಭದಲ್ಲಿ ಬಳಸಿಕೊಂಡು, ತೀವ್ರ ಪರಿಣಾಮವನ್ನುಂಟು ಮಾಡುತ್ತವೆ ಇಲ್ಲಿ.

## ಸುಕುಶೋಲ ಋಷಿ ಕಥೆ :

ಸುಕುಶೋಲು ಋಷಿ ಮುಗಿಲಗಿರಿಯ ಚಿತ್ರಕೂಟದಲ್ಲಿ ತಪಸ್ಸು ಮಡುತ್ತಿದ್ದನು, ನಾಲ್ಕು ತಿಂಗಳು ಉಪವಾಸವಿದ್ದು ಪಾರಣೆಗಾಗಿ ಬೆಟ್ಟದಿಂದ ಇಳಿದು ಬರುತ್ತಿದ್ದ. ಅವನನ್ನು ಒಂದು **ಹುಲಿ** ಹಿಂದಿನ ಜನ್ಮದಲ್ಲಿ ಅವನ ತಾಯಿಯಾಗಿದ್ದದ್ದು ಕಂಡು ಅವನ ಮೇಲೆ ಹಾರಿ ಅವನನ್ನು ಹರಿದು ತಿನ್ನುತ್ತದೆ, ಈ ಯಾತನೆಯನ್ನು ಅವನು ಸೈರಸಿ ಸತ್ತು ಸ್ವರ್ಗಕ್ಕೆ ಹೋಗುತ್ತನೆ.

*೨. ನರಸಿಂಹಚಾರ್ಯರು. ಪು.ಸಂ. – ೩೭ ವಡ್ಡರಾಧನೆ ಸಂ. ಡಿ. ಎಲ*

ಮೇಲಿನ ಕಥೆಯಲ್ಲಿಯ ಪ್ರಕೃತಿಯ ಪ್ರಾಣಿ ಸಂಕುಲದ ಸಂಸ್ಕೃತಿಯನ್ನು ಶಿವಕೊಟ್ಯಾಚಾರ್ಯರು ಕಥೆಯಲ್ಲಿ ಸುಂದರವಾಗಿ ಒಡಮೂಡಿಸಿದ್ದಾರೆ ಹುಲಿ ಪ್ರಾಣಿಯು ಹಿಂಸಕ ಪ್ರವೃತ್ತಿಯ ಗುಣ ಇಲ್ಲಿ ಪ್ರತಿಬಿಂಬಿಸುವುದು. ಇದರಿಂದ ಮುಂದೆ ಹಲವಾರು ಜನ್ಮಗಳಲ್ಲಿ ಕ್ರೂರ ಹಿಂಸೆಯನ್ನು ಅನುಭವಿಸುವ ಚಿತ್ರ ಇಲ್ಲಿದ್ದು ಅದು ಜನ್ಮಾಂತರಗಲ ಕಥೆಯಾಗಿ ಸೃಷ್ಠಿಯಲ್ಲಿಯ ಹುಲಿ ಅ ಭವಾವಳಿಯನ್ನು ಮುಂದುವರೆಸಲು ಕಾರಣವಾಗುತ್ತದೆ.

ಶಿವಕೊಟ್ಯಾಚಾರ್ಯರು ತನ್ನೆಲ್ಲಾ ಕಥೆಗಳಲ್ಲಿ ಆ ಮಹಾ ಪುರುಷರ ಜನ್ಮಾಂತರಗಳ ಸಂಭಂದ ಸೃಷ್ಠಿಸುವಾಗ ಈ ಪ್ರಾಣಿ, ಪಕ್ಷಿ, ಸಸ್ಯ, ಸಂಕುಲಗಳನ್ನು ಬಳಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಜೈನ ಧರ್ಮದ ಮೋಕ್ಷ ಸಾಧನೆಯ ಪಥದಲ್ಲಿ ಈ ಸೃಷ್ಠಿಯು ತುಂಬಾ ಸಹಾಯಕರಿ ಯಾಗಿರುವ ಚಿತ್ರ ಇಲ್ಲಿ ಕಾಣಿಸುತ್ತದೆ.

## ಪಂಪ :

ಕನ್ನಡ ಸಾಹಿತ್ಯದಲ್ಲಿ ಉಪಲ್ಬದವಿರುವ, ಸಮಗ್ರವಾಗಿ ಸಂಪೂರ್ಣವಾಗಿ ಲಭಿಸಿದ, ಮೊದಲ ಕಾವ್ಯವೆಂದರೆ ಪಂಪನ ಕೃತಿ ಪಂಪನು ಕನ್ನಡದ 'ಅದಿ ಕವಿ' ಎಂಬ ಗೌರವಕ್ಕೆ ಪಾತ್ರ ನಾಗುತ್ತಾನೆ. ಅಲ್ಲದೆ ಕನ್ನಡದ ಅಗ್ರ ಕವಿಯೂ ಹೌದು, ಈತನ ಕಾವ್ಯಗಳು 'ಹಿಂದಿನ ಕಬ್ಬಗಳನೆಲ್ಲಮಂ ಇಕ್ಕಿ ಮೆಟ್ಟಿದವು' ಮುಂದಿನ ಕಾವ್ಯಗಳಿಗೆ "ಬಟ್ಟೆ ದೋರಿಪವು" ಎಂದು ಹೇಳುವುದರೊಂದಿಗೆ ಕನ್ನಡದ ಅದ್ಭುತ ಕವಿಯೆಂದೇ ಖ್ಯಾತ ಪಡೆದು ಬೆಳೆದ ಕವಿ ಪಂಪ.೧

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಲಂಪಿ ನಿಂಪುಗ
ಳ್ಗಾಂಗವಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ
ನಾಗಿಯುಮೇನೋ ತೀರ್ದಪುದೆ ತಿರದೊಡಂ ಮರಿದುಂಬಿಯಾಗಿಮೆಣ್
ಕೋಗಿಲೆಯಾಗಿ ಪುಟ್ಟುವುದು ನಂದನದೋಳ್ ಬನವಾಸಿ ದೇಶದೊಳ್-೨

ಎಂದು ಕನ್ನಡ ನಡಿನ ಅಭಿಮಾನ ಮೇರೆವ ಪಂಪನ ಕನ್ನಡ ನಾಡಿನ ಮೇಲಿರು ಪ್ರೀತಿ ಅದ್ಭುತವಾಗಿ ಕೊಂಡಾಡುವನು. ಕವಿ ಪಂಪನು ತಾನುಳಿದ ಕನ್ನಡ ನಾಡಿನ ಬನವಾಸಿ ದೇಶದ ಮೇಲಿರುವ ಅಪಾರ ಪ್ರೀತಿ ಅಲ್ಲಿಯ ಪ್ರಕೃತಿಯ ಸಂಸ್ಕೃತಿ ಹಿನ್ನಲೆಯಲ್ಲಿ ಕಂಡು ಪಂಪ ಕೊಂಡಾಡಿದ್ದಾನೆ.

*೧ ಕ.ಸಾ.ಸಂ.ಕೊಶ.- ಚಿ.ಸಿ. ಲಿಂಗಣ್ಣ ಪು. ಸಂ. ೧೦ - ೧೬*

*೨ ಕ.ಸಾ.ಸಂ.ಕೊಶ.- ಚಿ.ಸಿ. ಲಿಂಗಣ್ಣ ಪು. ಸಂ. ೧೦ - ೧೬*

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡ ಮಿಂಪನಾಳ್ದಗೇ
ಯಂ ಕಿವಿವೊಕ್ಕಡಂ ಬಂದ ಮಲ್ಲಿಗೆಗಂಡೊಡಮಾದ ಕಂದಲಂ
ಪಂ ಗೆಡೆಗೊಂಡೊಡಂ ಮಧು ಮಹೋತ್ಸವಮಾದೊಡ ಮೇನನೆಂಬನಾ
ರಂಸುರವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ –೩

ಇಂಥನಾಡ ಪ್ರಿತಿಗಾಗಿ ಈ ಕವಿಯನ್ನು ಕುರಿತು ನಾಗರಾಜ ಕವಿ 'ಪಸರಿಪ ಕನ್ನಡಕ್ಕೊರ್ವನೆ ಸತ್ಕವಿ ಪಂಪನಾಗವಂ' ಎಂದು ಸಾರಿದ ಮಾತು ಅಕಾಶದ ಸೂರ್ಯನ ಹಾಗೆ ಸಾಹಿತ್ಯ ಜಗತ್ತಿನಲ್ಲಿ ಪ್ರಸಿದ್ದವಾಗಿದ್ದಾನೆ, ಪಂಪನ ಕಾವ್ಯದ ಗುಣ ರೀತಿ ದೇಸಿಯತೆಯ ಇಂಪು, ಬೆಡಗುಗಳು ಇವು ಕನ್ನಡ ಪ್ರಕೃತಿ ಪ್ರೀತಿಗೆ ದ್ಯೋತಕವಾಗಿದೆ.

ಪಂಪನು ಕನ್ನಡ ಮಣ್ಣಿನಲ್ಲಿ ಹುಟ್ಟಿ ಬೆಳೆದು ಕನ್ನಡ ನೆಲ, ಜಲ, ಸಸ್ಯ, ಪ್ರಾಣಿ ಪಕ್ಷಿಸಂಕುಲ ಸಂಸ್ಕೃತಿಯು ಕಂಡು ಅನುಭವಿಸಿ ಆನಂದಿಸಿ ಬೆಳೆದ ಕನ್ನಡದ ಕವಿ ಎನಿಸಿದ್ದಾನೆ ಪಂಪನ ಪೂರ್ವೋತ್ತಜರು ವೆಂಗಿಮಂಡಲಕ್ಕೆ ಸಂಬಂದಿಸಿದ್ದರೂ ಅವನ ಹೃದಯ ಮಾರು ಹೋದುದು ಅಚ್ಚಗನಡ ಪ್ರಾಂತವಾದ 'ಬನವಾಸಿಯು ಪ್ರಕೃತಿಗೆ' ಹೆಸರು ವಾಸಿಯಾದುದು, ತಿರಳ್ಗನ್ನಡ ಈ ಪ್ರದೇಶವು ತುಂಬಾ ಸುಂದರವಾದುದು. ಗಿಳಿ, ಕೋಗಿಲೆ, ಮೃಗ ಸಂಪತ್ತಿರುವ ನಾಡು. ಅದನ್ನು ಬಿಟ್ಟಿರದ ಪಂಪನು

" ಆರಂಕುಶಮಿಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಂ" ಎಂದು ಹೇಳುತ್ತಾನೆ.

ಪಂಪ ಎಲ್ಲಿಯೇ ಹುಟ್ಟಿ ಬೆಳೆದಿರಲಿ ಬನವಾಸಿಯ ಮಲೆನಾಡಿನಲ್ಲಿ ಅವನ ಜೀವಮಾನದ ಸಾರವತ್ತಾದ ಭಾಗ ಕಳೆದಿರುವುದು ಸತ್ಯ, ಅವನ ಮನಸ್ಸುನ್ನು ತಿದ್ದ ಈ ನಾಡು ಅವನ ಕವಿತಾ ಶಕ್ತಿಯನ್ನು ಸ್ಪುಟಗೊಳಿಸಿರಬೇಕು ಎನ್ನುತ್ತಾರೆ. ತಿ.ನಂ ಶ್ರೀಯರು, ಪಂಪನ ಕಾವ್ಯಭಾಷೆ ಪುಲಗೆರೆಯ ತಿರುಳ್‌ಗನ್ನಡ್ ಅವನ ಶೈಲಿ ಹಿತಮಿತ, ಮೃದುವಚನ, ಅವನ ಪ್ರಸನ್ನ ಗಂಭೀರ ವಚನ ರಚನೆ ಚತುರತೆ ಪಂಪನ ಕಾವ್ಯಗಳ ಪ್ರಕೃತಿಯಲ್ಲಿ ಅದ್ಭುತ ಚಿತ್ರಣವಾಗಿ ಮೂಡಿ ಬಂದಿರುತ್ತದೆ.

*೩ ಮಾತೃ ಭಾಷೆ ಮತ್ತು ತತ್ವ ಬೋದನೆ ಪು. ಸಂ. ೩೨೬*

## ಪಂಪನ "ವಿಕ್ರಮಾರ್ಜುನ ವಿಜಯ" :

ಈ ಕೃತಿಯಲ್ಲಿಯ ಹಲವು ಸಂದರ್ಭಗಳಲ್ಲಿ ಪ್ರಾಣಿ, ಪಕ್ಷಿ, ಸಸ್ಯ, ಸಮುದ್ರ, ಸರೋವರ, ಇತ್ಯಾದಿ ಪ್ರಕೃತಿದತ್ತವಾದ ಅಂಶಗಳ್ಲು ಒಡಮೂಡಿರುವುದು ಎದ್ದು ಕಾಣುತ್ತದೆ. ಕಾವ್ಯವೆಂದರೆ ಹೇಗಿರಬೇಕು ಎಂಬುದನ್ನು ಕುರಿತು ಹೇಳುವಾಗ ಪಂಪನ ಬಗೆ ಹೊಸದಾಗಿ ಮೃದು ಭಂಧದಲ್ಲಿ ಒಂದ ಬೇಕು ಎಂದು ಹೇಳುತ್ತ ದೇಶಿಯಲ್ಲಿ ಅದು ಹೊಕ್ಕು ಮಾರ್ಗದಲ್ಲಿ ಸಂಗಮಿಸಿದರೆ ಕಾವ್ಯಬಂದವು ಶೋಭಿಸಿವುದು ಹೇಗೆಂದರೆ 'ಕೆಂದಳಿರಿಂದ ವಪ್ಪ ಹೊಗೊಂಚಲಿಂದ ಜಗ್ಗಿ, ತುಂಬಿಗಳಿಂದ ತುಂಬಿ, ಕೋಗಿಲೆ ಕೂಗಿದರೆ ಸುಗ್ಗಿಯಲ್ಲಿ ಎಳೆಮಾವಿನ ಮರ ಶೋಭಿಸುವಂತೆ ಸಕಲ ಅರ್ಥವಿರಬೇಕೆಂದು ಸೊಗಸಾದ ವರ್ನನೆ ಅಲ್ಲವೇ? ಹಾಗೆಯೇ ಹಸ್ತಿನಾಪುರದ ವರ್ಣನೆ, ತುಂಬಾ ನವೀನವಾಗಿದೆ ಹಸ್ತಿನಾಪುರದ ಹೊರವಳದಲ್ಲಿ 'ಹಣ್ಣು ತುಂಬಿದ ಮರಗಳು, ಮೊಗ್ಗು ಕುಡಿ ಚಿಗುರು ಹೂ ತುಂಬಿದ ಕಾಡುಬಳ್ಳಿಗಳ ಕುಟೀರಗಳು, ಅಲ್ಲೆ ಪುಷ್ಪರಾಗದ ಕುಪ್ಪೆಗಳು, ಅಕಾಶವೇ ಹರಿದು ಬಿದ್ದಂತಿರುವ ಕೆರೆಗಳು, ಅದರ ಸಮೀಪದಲ್ಲಿ ಕೇಕೆ ಹಾಕುವ ನವಿಲುಗಳು, ಮೊಗ್ಗುಗಳಿಗೆ ಮುಸುಕಿದ ದುಂಬಿಗಳ ದಂಡು, ತೊಳಗುವ ಗಿಳಿಯ ಮರಿಗಳು, ಇದ್ದವಮ್ತೆ, ಹೀಗೆಯೇ ಪಾಂಡುವಿನ ಶತಶೃಂಗ ವರ್ಣನೆ, ಪಾಂಡುರಾಜನ ಮರಣ ಸಂಧರ್ಭದ ವರ್ಣನೆ, ಹಿಡಿಂಬವನದ ವರ್ಣನೆ, ಇಂದ್ರಪ್ರಸ್ಥ ವರ್ಣನೆ, ಸುಭದ್ರಾ ಪ್ರಸಂಗದ ವರ್ಣನೆ, ಸುರ್ಯಾಸ್ತ ರಾತ್ರಿಯ ವರ್ಣನೆಗಳು, ಅರ್ಜುನ-ಸುಭದ್ರೆಯರ ಸಮಾಗಮ, ಯಮುನಾ ತೀರದ ವರ್ಣನೆ, ಖಂಡವವನ ಪ್ರಶಸ್ತಿ, ಪಾಂಡವರ ವನವಾಸದ ಸಂದರ್ಭ, ಮುಂತಾದ ಅನೇಕ ಪ್ರಸಂಗಗಳಲ್ಲಿ ಪಂಪ ಕವಿಯ ಅದ್ಭುತ ವರ್ಣನೆಗಳನ್ನು ಕಾಣಬಹುದು.

ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ಧಳಿದಾಗಳಾ<br>ಮದಗಜೌಂಕುಶದಿಂದೆ ಪೆರ್ಚಿಸಿ ನಾಭಿಯಂ ಮದದಂತಿ ಧಂ<br>ತದೊಳೆ ಕಟ್ಟಿದ ತೊಟ್ಟಿಲಂ ನಯದಿಂದ ಮೇವಿಸೆ ಬಾಳೆ ಕಾ<br>ಲದೊಳೆ ತೊಟ್ಟಿಲಿಗಂ ಜಗಪ್ರಿಯನಪ್ಪುದಂ ಸತಿ ತೋವಿದಂ

*ಸಮಸ್ತ ಭಾರತ ಗು.ವಿ.ಗು ಪು. ಸಂ. ೩೫*

ಮೇಲಿನ ಪದ್ಯದಲ್ಲಿ ಕವಿ ಪಂಪ 'ಆನೆಯ' ವರ್ಣನೆಯನ್ನು ಕಥನಾಯಕನೊಂದಿಗೆ ಸಮಿಕರಿಸಿದ ಸಂದರ್ಭವನ್ನು ನೋಡುತ್ತೇವೆ. ಅನೆಯು 'ಮದ'ದಿಂದ ಹಾಗೂ ಬಿಸಿನಿರಿನಿಂದ ಹಾಗೂ ಅನೆಯ ಅಂಕುಶದಿಂದ ನಾಡೆಯನ ನಾಭಿಯ ಬಳ್ಳಿಯನ್ನು ಕತ್ತರಿಸಲಾಯಿತು ಎಂಬ ಪ್ರತಿಮೆಯಲ್ಲಿ ಕವಿ ಪಂಪ ಸುಂದರವಾಗಿ ವರ್ಣಿಸಿದ್ದನೆ. ಇಲ್ಲಿ ಆನೆ ಬಲಾಡ್ಯವಾದ

ಪ್ರಾಣಿ ಈ ಪ್ರಾಣಿಯ ಪ್ರತಿರೂಪ ಬಲಾಢ್ಯ ಶಕ್ತಿಯನ್ನು ಕವಿ ತನ್ನ ಕಥಾನಾಯಕನಲ್ಲಿ ಕಾಣಲು ಪ್ರಯತ್ನಿಸುತ್ತಾನೆ. ಹೀಗೆ ಪಂಪನು ತನ್ನ ಕಾವ್ಯದಲ್ಲಿ ಪ್ರಾಣಿಗಳ ಬಲಾಢ್ಯ ಶಕ್ತಿಯನ್ನು ಅದರ ಗುಣ ಸಂಸ್ಕೃತಿಯನ್ನು ಕಾವ್ಯದ ಮೂಲಕ ಹಾಗೂ ಪ್ರಾಣಿ ಪ್ರೀತಿಯ ಭಾವವನ್ನು ಮೆರೆಯುತ್ತಾನೆ. ಪ್ರಾಣಿಗಳನ್ನು ಕುರಿತು ಇನ್ನೊಂದು ಪದ್ಯವನ್ನು ನೋಡಿದಾಗ,

ಎಂದು ವಿಳಯ ಕಾಳ ಜಳಧರ ನಿನಾದದಿಂ ಗಜತಿ ಗರ್ಜಿಸಿದ
ಜಡಾಸುರಾ ರಾತಿಯ ಗಳಗರ್ಜನೆಗೆ ಕರಿ ಕಳಭ ಗರ್ಜನೆಗೇಳ್ವ
ಮೃಗರಾಜನಂತೆ ರಾಜರಾಜಂ ಸೈರಿಸದೆ ಚಿತ್ತಸ್ಖಲನೆಯಾಗೆ ಜಳಸ್ಥಂಭ
ಮಂತ್ರಮೆಲ್ಲಂ ಮಯಾಮಂತ್ರಮಾಗೆ

*ಸಮಸ್ತ ಭಾರತ ಗು.ವಿ.ಗು ಪು. ಸಂ. ೬೧*

ಕ ಪದ್ಯದ ಮೂಲಕ ಕವಿ ಪಂಪನು ಪ್ರಕೃತಿಯ ಮೇಘದ ಗರ್ಜನೆ, ಆನೆಯ ದ್ವನಿ, ಸಿಂಹ ಗರ್ಜನೆ, ಈ ಎಲ್ಲಾ ಪ್ರಾಣಿಗಳ ಗರ್ಜನೆಯ ದ್ವನಿಯನ್ನು ಭೀಮನ ಭಯಂಕರ ಗರ್ಜನೆಯ ಸ್ವರೂಪಕ್ಕೆ ಪ್ರತಿಬಿಂಬಿಸುತ್ತಾನೆ.

ಇಲ್ಲಿ ವ್ಯಕ್ತವಾದ ಆನೆ ಸಿಂಹ, ಮೋಡಗಳ ಅರ್ಭಟತೆಗಳನ್ನು ಅವುಗಳ ಕ್ರಿಯೆಯ ಹಿನ್ನಲೆಯಲ್ಲಿ ಪ್ರಕೃತಿಯ ಸಂಸ್ಕೃತಿಯನ್ನು ಪ್ರತಿಬಿಂಬಿಸಲಾಗಿದೆ. ಈ ಪ್ರಾಣಿಗಳ ಬಲಾಢ್ಯ ಶಕ್ತಿ ಅವುಗಳ ಗರ್ಜನೆಯನ್ನು ಕವಿ ಪಂಪನು ಕಾವ್ಯದಲ್ಲಿ ಸುಂದರವಾಗಿ ಒಡಮೂಡಿಸಿದ್ದಾನೆಂದು ಎಂದು ಹೇಳಬಹುದು.

ಪಂಪನ ಕಾವ್ಯಗಳಾದ 'ಆದಿಪುರಾಣಂ' ಮತ್ತು 'ಪಂಪಭಾರತ' ಈ ಎರಡು ಕೃತಿಯಗಳಲ್ಲಿ ಪ್ರಕೃತಿಯ ಚಿತ್ರಣವು ಅದ್ಭುತವಾಗಿ ಒಡಮೂಡಿ ಬಂದಿವೆ. ಪಂಪ ತನ್ನ 'ಆದಿಪುರಾಣ' ಕಾವ್ಯದಲ್ಲಿಯ ಸಸ್ಯ ಸಂಸ್ಕೃತಿಯನ್ನು ಸುಂದರವಾಗಿ ಬಳಸಿಕೊಂಡಿರುವುದನ್ನು ಇಲ್ಲಿ ನೋಡುತ್ತೇವೆ.

"ನರಭೋಗ ಮೆಂಬೀ ಪನಿಪುಲ್ಲಂನಕ್ಕೆ ತೃಷ್ಣ ಪೇವ್ ವೋದೆಪುದೆ"
ಇನ್ಂತಿರಿಯಲಾರೆಂ ಭವಾಂಬೋದಿಯಾಳ್" ೧

*೧ ಕ.ಸಾ.ಸಂ.ಕೊಶ.- ಚಿ.ಸಿ. ಲಿಂಗಣ್ಣ ಪು. ಸಂ. – ೧೨*

ಎಂದು ಹೇಳುತ್ತಾನೆ "ಪುನಿಪುಲ್ಲಂ" ಎಂಬ ಪದ 'ಸಸ್ಯ' ರಾಶಿಯನ್ನು ಪ್ರತಿಬಿಂಬಿಸುವ ಪದವಾಗಿದ್ದು ಇದು ವೃಷಭದೇವನಿಗೆ ಸಂಸಾರದ ಅನಿತ್ಯತೆಯನ್ನು ತಿಳಿಸಿ ವೈರಾಗ್ಯಪರನಾಗಿ ಹೊರಡುವಂತೆ ಮಾಡುತ್ತದೆ ಈ ಸಂದರ್ಭ ಇಲ್ಲಿ ಮಾನವನಿಗೆ ಭೋಗ ಜೀವನವೆಂಬುದು "ಹುಲ್ಲಿನ ಮೇಲಿರುವ ಹನಿಯಂತೆ" ಕ್ಷಣೀಕವಾದುದು ಎಂದು ತಿಳಿಸಿ ತಾನು ವೈರಾಗ್ಯ ಹೊಂದಿ ಜೈನಧರ್ಮವು ಸ್ವಿಕರಿಸಿ ತಪಸ್ಸಿಗೆ ಹೊರಡಲು ಸಹಾಯ ಮಾಡುತ್ತದೆ.

ಇಲ್ಲಿ ಮೂಡಿ ಬಂದಿರುವ ಸೃಷ್ಟಿಯ ಸಸ್ಯ ಹಾಗೂ ಹುಲ್ಲಿನ ಮೇಲಿನ 'ನೀರಿನ ಹನಿ' ಇವು ಪ್ರಕೃತಿ ಪ್ರೀತಿಯ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. 'ಆದಿಪುರಾಣಂ' ಕೃತಿಯ ಇನ್ನೊಂದು ಪದ್ಯವನ್ನು ಪ್ರಕೃತಿಯ ಸಸ್ಯ ಭ್ರಮರಗಳು, ವನ, ಕಮಲ, ಸರೋವರ ಇತ್ಯಾದಿ ಅಂಶಗಳ ಹಿನ್ನಲೆಯಲ್ಲಿ ಕಾಣಬಹುದು.

"ನೆಲೆಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗ ಮಂಡಲೋ
ತ್ಪಲವನ ವಿಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
ವಲಯ ಮನಯ್ಯ ನಿತ್ತುದುಮನಂ ನಿನಗಿತ್ತೇದೇವುದಣ್ಣಾ ನೀ
ನೋಲಿದ ಲತಾಂಗಿಗಂ ಧರೆಗಮುಟಿಸಿದುದು ನೆಗಪ್ತಿ ಮಾಸದೇ"

*ಕ.ಸಾ.ಸಂ.ಕೊಶ.– ಚಿ.ಸಿ. ಲಿಂಗಣ್ಣ ಪು. ಸಂ. – ೧೨*

ಮೇಲ್ಕಂಡ ಪದ್ಯದಲ್ಲಿ ಕವಿ ಪಂಪನು ಪ್ರಕೃತಿಯ ವನ, ಕಮಲ, ಕೊಳ, ದುಂಬಿ, ಲತೆ, ಬಳ್ಳಿ, ಇವುಗಳನ್ನು ಬಳಸಿ ಪ್ರಕೃತಿ ಸಂಸ್ಕೃತಿಯನ್ನು ಪ್ರತಿಬಿಂಬಿಸಿದ್ದಾನೆ, ಕಮಲಗಳು ವನಗಳು ಮಾನವನ ಹೃದಯವನ್ನು, ಮನಸ್ಸನ್ನು ಅರಳಿಸುವ ಅದ್ಭುತ ಶಕ್ತಿಯನ್ನು ಪಡೆದವುಗಳಾಗಿವೆ. ದುಂಬಿಗಳು ಸದಾ ಪರೋಪಕಾರಿ ಜೀವಿಗಳಂತೆ ಬದುಕುವ ಸಂಗತಿಯಿದೆ, ಇವು ಇನ್ನೊಬ್ಬರ ಬಾಳಿಗೆ ಸಿಹಿಯನ್ನೇ ನೀಡಿ ತಾವು ಮಾತ್ರ ಶ್ರಮದಲ್ಲಿಯೇ ಬದುಕನ್ನು ಸವೆಸುತ್ತವೆ.

ಇವುಗಳಲ್ಲಿರುವ ನಿಷ್ಕಾಮಕವಾದ ಭಾವವನ್ನು ಕವಿ ತನ್ನ ಕಾವ್ಯದಲ್ಲಿ ಒಡಮೂಡಿಸಿ ಪ್ರಕೃತಿ ಸಂಸ್ಕೃತಿಯನ್ನು ಪ್ರತಿಬಿಂಬಿಸಿದ್ದಾನೆ.

ಪಂಪನ ಇನ್ನೊಂದು ಪ್ರಕೃತಿಯ ಪುಷ್ಪಗಳ ಕುರಿತಾದ ಪದ್ಯ

ತಳಿರೋಳ್ ನೀನೆ ಬೆಡಂಗನ್ನೈ
ನನೆಗಳೊಳ್ ನೀಂ ನೀರನ್ನೈ

ಪುಷ್ಪ ಸಂಕುಲ ದೊಳ್ ನೀನೆ ವಿಲಾಸಿಯೈ
ಮಿಡಿಗಳೊಳ್ ನಿಂ ಚಲ್ವನೈ
ಪಣ್ತ ಪಣ್ಣಳಿ ನೋಪೊ ಪವಿತೀನೋ ನೀನೆ ಭುವನಕ್ಕಾರದ್ಯನೈ

*ಸಮಗ್ರ ಗದ್ಯ – ಜಿ.ಎಸ್. ಶಿವರುದ್ರಪ್ಪ ಪು. ಸಂ. – ೧೯*

ಹೀಗೆ ಕವಿ ಪಂಪನ ಸಸ್ಯ ಸಂಕುಲ ಮಾವಿನ ಮರ, ಚಿಗುರು, ಹೂವು, ಹಣ್ಣು, ತಳಿರು ಇತ್ಯಾದಿಳು ಪಕ್ಷಿ ಸಂಕುಲ ಚಿತ್ರಣ, ಪ್ರಕೃತಿಯ ಸಂಸ್ಕೃತಿಯ ಸ್ವರೂಪದಲ್ಲಿ ಪಂಪ ತನ್ನ ಕಾವ್ಯಗಳಲ್ಲಿ ಸುಂದವಾಗಿ ಒಡಮೂಡಿಸಿ, ಪ್ರಕೃತಿ ಪ್ರೀತಿಯ ಕವಿಯೆಂದು ಪ್ರಶಂಸೆಗೆ ಪಾತ್ರನಾಗಿದ್ದಾನೆ.

ಅಲ್ಲದೆ ಮೇಲಿನ ಪದ್ಯವನ್ನು ನಾವು ಸೂಕ್ಷವಾಗಿ ನೋಡಿದಾಗ ಯಾವುದರಲಿಯು ತಾನೆ ಈ ಮಾವಿನ ಮರ ಉಳಿದ ಮರಗಳಿಗಿಂತ ಶ್ರೇಷ್ಠವಲ್ಲವೇ ತಳಿರಿನಲ್ಲಿ, ನೆನೆಗಳಲ್ಲಿ, ಹೂವಿನಲ್ಲಿ, ಮಿಡಿಯಲ್ಲಿ, ಹಣ್ಣಿನಲ್ಲಿ, ಉಳಿದ ಮರಕ್ಕೆ ಎಲ್ಲಿ ಬಂತು ಈ ಸೊಗಸು ಎಂದು ಕವಿ ಅತ್ಯಂತ ಎತ್ತರದ ನಿಲುವಿನಲ್ಲಿ ಪ್ರಕೃತಿ ಸಂಸ್ಕೃತಿಯ ಸೌಂದರ್ಯಯವನ್ನು ಕೊಂಡಾಡಿದ್ದಾನೆ.

ಅಲ್ಲದೆ ಪ್ರಕೃತಿಯ ಪ್ರಿಯತೆ ಪ್ರಕೃತಿಯಲ್ಲಿಯ ಕೊಳಗಳು, ಮರಗಳು, ಲತೆಗಳು, ಹೂವು ಹಣುಗಳು ಈ ನಂದನದಲ್ಲಿ ಅದ್ಭುತವಾಗಿ ಕಂಡು ಅದರಲ್ಲಿಯ ಸೌಂದರ್ಯ ಸುಗಂಧಿತ ಎಲ್ಲವು ಅಂದವಾಗಿ ಒಡಮೂಡಿ ಬಂದಿವೆ. ಪುಷ್ಪರಾಶಿಯನ್ನು ಕಂಡ ಪಂಪನು ಪಾರಿಜಾತ, ಮಲ್ಲಿಗೆ, ಜಾಜಿ, ಮಾವಿನ ಚಿಗುರು, ಮಾವಿನ ಮಿಡಿ. ಸಂಪಿಗೆ, ಕರ್ಣಿಕಾರ, ಪಾಟಲಿ, ಸುರಹೊನ್ನೆ, ಕೇದಗೆ, ಕನ್ನೈದಿಲೆ, ಒಂದೆ ಎರಡೇ? ಈ ಹೂವುಗಳ ಸಂಪಿಗೆ ಮನ ಮಾರುಹೋಗುತ್ತದೆ ಕವಿ ಪಂಪನ ಕಣ್ಣು ಪ್ರತಿಯೊಂದು ಹೂವಿನ ಸೊಗಸನ್ನು ಇಡಿ ಇಡಿಯಾಗಿ, ಬಿಡಿ ಬಿಡಿಯಾಗಿ ಬಣ್ಣಿಸಿ ಅದರ ಬಗ್ಗೆ ಹೊಸತೊಂದು ಲೋಕವನ್ನೆ ಸೃಷ್ಟಿಸಿ ಕಣ್ಮನ ತೆರೆಸುತ್ತದೆ.

ಹೀಗೆ ಅಕ್ಕಮಹಾದೇವಿಯ ಪ್ರಕೃತಿಯ ಸಸ್ಯ, ಪ್ರಾಣಿ, ವನ, ಪ್ರಿಯತೆ ಅವುಗಳಲ್ಲಿ ಅಡಗಿರುವ ಅಂದ ಚಂದತೆಯ ಸಂಸ್ಕೃತಿಯು ಪಂಪನ ಕಾವ್ಯಗಳಲ್ಲಿಯು ಅದ್ಭುತವಾಗಿ ಮೂಡಿ ಬಂದಿದೆ ಅವನು ಕಂಡುಕೊಂಡ ಪುಷ್ಪ, ಪಕ್ಷಿ, ಕೊಳ, ಮಾಮರ ಚಿಗುರು ಚೆಲವು ಸುದರವಾಗಿ ಒಡಮೂಡಿವೆ ಎನ್ನ ಬಹುದು.

## ರನ್ನ :

ರನ್ನ ಕನ್ನಡ ಸಾಹಿತ್ಯ ಶ್ರೀಮಂತಗೊಳಿಸಿದ 'ಗಂಡು ಕವಿ,' 'ಕವಿರತ್ನ' ಎಂಬ ಬಿರುದು ಖ್ಯಾತಿ ಪಡೆದ ಕವಿ ರನ್ನನು ತನ್ನ ಕಾವ್ಯದಲ್ಲಿ ಪ್ರಕೃತಿ ಪ್ರಿಯೆತೆಯ, ಪ್ರಕೃತಿ ಸಂಸ್ಕೃತಿಯನ್ನು ಸುಂದರವಾಗಿ ಒಡಮೂಡಿಸಿದ್ದಾನೆ. ರನ್ನನ 'ಅಜಿತನಾಥ ಪುರಾಣಂ' ಕಾವ್ಯ ಒಂದರಲ್ಲಿ ಪ್ರಕೃತಿಯ ಪಕ್ಷಿಗಳ ಪ್ರಿಯೆತೆ ತುಂಬಾ ಸುಂದರವಾಗಿ ಪ್ರತಿಬಿಂಬಿತವಾಗಿದೆ.

'ಬಿಡಿಮಾವೀಪದ ರಾಜಹಂಸಗಳಂ
ಲಲಿತಲತಾಯುಗಳಿರ ------
ವಿಯೋಗ ಮಾದುದು ನಿಮಗಮೆಮಗಂ-
ಎಲೆ ಪರಪುಷ್ಪ ಕೇಳಲೆ ಮಧುವತ್ರ ಕೇಳ್-
ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದಗ್ಗಲಿಸಿದ
ನಲ್ಮೆ ತಣ್ಮಯೆ ಚಿನ್ನನೆ ಪೋದಪೆಮೆಮ್ಮ ಸಾಮಿಯಾ'

*ಕ.ಸಾ.ಚ.- ರಂ.ಶ್ರೀ. ಮುಗಳಿ ಪು. ಸಂ. - ೧೨೬*

ಇಲ್ಲಿಯ ಅಜಿತ ಸ್ವಾಮಿಯ ಧೃಢವೈರಾಗ್ಯದ ಹಿನ್ನಲೆಯಲ್ಲಿ ಹೆಚ್ಚಾಗಿ ವ್ಯಾಪಾರದ ಪರಿಚಯವಿದೆ. ಇಲ್ಲಿ ಪ್ರಕೃತಿಯ ಪುಷ್ಪ, ಹಂಸಗಳು ಸುಂದರವಾಗಿ ಮೂಡಿ ಬಂದಿವೆ. ಕವಿ ರನ್ನನಲ್ಲಿರುವ ಪ್ರಕೃತಿ ಸಂಸ್ಕೃತಿಯು ಈ 'ಅಜಿತನಾಥ ಪುರಾಣ' ಕೃತಿಯಲ್ಲಿ ಅದ್ಭುತವಾಗಿ ಒಡಾಮೂಡಿ ಬಂದಿರುತ್ತದೆ. ರನ್ನನ 'ಗದಾಯುದ್ದ' ಕಾವ್ಯದಲ್ಲಿ ಮೂಡಿ ಬಂದ ಒಂದು ಪದ್ಯ ಹೀಗಿದೆ.

ವಿರುವತ್ಸಾರಸ ರಾಜ ಹಂಸರವದಿಂದೇಂವಂದಿರೇ ಬನ್ನಿಮಿಂ ।
ತಿರಿಮೆಂದಾದರಿಪಂತುಟಾಯ್ತು ಪವನೋದ್ಧೋತ್ತೋತರಂ ರಾಂಬುವಿಂ॥
ತರದಿಂ ಕಲ್ಗೆಪಂತುಟಾಯ್ತು ವಿಕಸತ್ವಂಕೇಜದಿಂ ಪಂಕಜಾ
ಕರಮರ್ಘ್ಯಂಗುರವಂತುಟಾಯ್ತು ನಿಲಜಂಗ ಭ್ಯಾಗತ ಪ್ರಿತಿಯಂ॥

*ಸಹಾಸ ಭೀಮ ವಿಜಯಂ-ಆರ್.ವಿ. ಕುಲಕರ್ಣಿ ಪು. ಸಂ. - ೧೨೨*

ಮೇಲಿನ ರನ್ನನ ಪದ್ಯ 'ಗದಾಯುದ್ದ' ಕಾವ್ಯದಲ್ಲಿಯ ಕಮಲ ಸರೋವರ, ವೈಶಂಪಾಯ ಸರೋವರದ ಸುಂದರ ಚಿತ್ರ ಭೀಮನನ್ನು ಸ್ವಾಗತಿಸುವ ಪರಿಯು ರನ್ನನ ಪ್ರಕೃತಿ ಸೌಂದರ್ಯಕ್ಕೆ ಸರೋವರದಲ್ಲಿಯ ಸಾರಸ ಪಕ್ಷಿಗಳು ರಾಜಹಂಸಗಳು, ಕಮಲಗಳು, ಸರೋವರದ ಜಲರಾಶಿ, ಇತ್ಯಾದಿ ಪ್ರಕೃತಿಯ ಚಿತ್ರಣ. ರನ್ನನ ಕಾವ್ಯದಲ್ಲಿ ಸುಂದರವಾಗಿ

ಒಡಮೂಡಿದೆ. ಧ್ವನಿ ಮಾಡುತ್ತಿರುವ ಸಾರಸ ರಾಜ ಹಂಸಗಳ ಕಲಕಲದ ರೂಪದಲ್ಲಿ ಬಂದಿರಾ? ಹೀಗೆ ಬನ್ನಿ ಎಂದು ಆದರಿಸುವಂತಾಯಿತು : ಗಾಳಿಯ ರಭಸಕ್ಕೆ ಏರಿ ಬಂದ ತೆರೆಗಳ ನೀರಿನಿಂದ ಪಾದಗಳಿಗೆ ನಮಸ್ಕಾರ ಮಾಡುವಂತಯಿತು,
ಅರಳುವ ತಾವರೆಗೆಳಿಂದ ಅರ್ಘಕೊಡುವಂತಾಯಿತು ಹೀಗೆ ಆ ಕಮಲ ಸರೋವರವು 'ಭಿಮನಿಗೆ ಪ್ರೀತಿಯಿಂದ ಅಭ್ಯಂಗತವಾಗಿ ಅಹ್ವಾನಿಸುವ ಭಾವ ಈ ಪದ್ಯದಲ್ಲಿ ಸುಂದರವಾಗಿ ಮೂಡಿ ಬಂದಿದೆ.

ಕವಿ ರನ್ನನ ಕಾವ್ಯಗಳಲ್ಲಿ ರಾಜಹಂಸ, ವೈಶಾಂಪಯ ಸರೋವರದ ಚಿತ್ರಣ ಪುಷ್ಪವನದ ವರ್ಣನೆ ರನ್ನನ ಕಥಾ ಇತಿಹಾಸದಲ್ಲಿ ಸುಂದರ ಚಿತ್ರಣ ವೆನ್ನಬಹುದು ಧುರ್ಯೋಧನ ಬಂದಾಗ ಇದರ ವಿರುದ್ದದ ವರ್ಣನೆ ಇನ್ನು ಸೊಗಸಾಗಿ ಅಭಿವ್ಯಕ್ತವಾಗಿದೆ.

## ಎರಡನೆಯ ನಾಗವರ್ಮ :

ಕನ್ನಡ ಸಾಹಿತ್ಯದಲ್ಲಿ ಕಾವಿರಾಜಹಂಸ, ಬುದಾಬ್ಜ, ವನಕಂಳಹಂಸ, ಇತ್ಯಾದಿ ಬಿರುದುಗಳೊಂದಿಗೆ ಮೆರೆದ ಎರಡನೆ ನಾಗವರ್ಮನು, ಕನ್ನಡ ಸಾಹಿತ್ಯ ಲೋಕಕ್ಕೆ ತನ್ನದೆಯಾದ ಕೊಡುಗೆಯನ್ನು ನೀಡಿದ್ದಾನೆ. ಈತನು ೧ಂನೇ ಶತಮಾನದ ಕೊನೆಯ ಭಾಗದಲ್ಲಿ ಬಾಳಿದನೆಂದು ತಿಳಿಯುತ್ತದೆ. ಈತನ ಕೃತಿಗಳು ಎರಡು ೧) ಧಂದೋಂಬುದಿ ೨) ಕರ್ನಾಟಕ ಕಾದಂಬರಿ, ಕರ್ನಾಟಕ ಕದಂಬರಿಯಲ್ಲಿ ಪ್ರಕೃತಿ ಮರ್ಣನೆ, ಪ್ರಾಣಿ, ಪಕ್ಷಿ, ಸುಂಕಲ ಕುರಿತು ಸುಂದರವಾಗಿ ಮೂಡಿ ಬಂದಿದೆ . ಕರ್ನಾಟಕ ಕಾದಂಬರಿಯಲ್ಲಿಯ ಮೂಡಿ ಬಂದಿರುವ ಪ್ರಕೃತಿ ಪಕ್ಷಿ ಕುರಿತು ಸಂಕ್ಷಿಪ್ತ ಕಥಾ ಭಾಗ ಈ ಕೆಳಗಿನಂತಿದೆ.

**ಉದಾ:**

ಶೂದ್ರಕರಾಜನ ಆಸ್ಥಾನಕ್ಕೆ 'ನೀಲಮಣಿ ಪತ್ರಿಕೆ' ಅಂದದ ಚಂಚಲಕನ್ಯೆ ವೃದ್ದ ಚಂಚಲ ಬಾಲಕ ಪ್ರವೇಶಿಸುತ್ತಾರೆ. ಚಂಚಲಕನ ಕೈಯಲ್ಲಿ ಗಿಳಿಯ ಪಂಜರವಿದೆ ಅವನು ಆ ಗಿಳಿಯ ಪ್ರಶಂಸೆ ಮಾಡುತ್ತಾನೆ, ಗಿಳಿಯ ಹರಕೆಯನ್ನು ಕೇಳಿ ಅದರ ಚತುರೋಕಿಯನ್ನು ಕೇಳಿ ಮೆಚ್ಚಿದ ರಾಜನಿಗೆ ಆ ಗಿಳಿಯ ಪೂರ್ವ ವೃತಾಂತ ಕೇಳಲು ಕೂತೂಹಲ ಪಡುತ್ತಾನೆ. ಅರಸ ಆಗ ಚಂಚಲ ಬಾಲಕ ಅ
ಗಿಳಿಯ ಪೂರ್ವ ಜನ್ಮದ ವೃತಾಂತ ಹೇಳುತ್ತಾನೆ. – ೧

ಹೀಗೆ ಕರ್ನಾಟಕ ಕಾದಂಬರಿಯಲ್ಲಿಯ ಕವಿನಾಗವರ್ಮನು, ಪ್ರಕೃತಿಯ ಸುಂದರ ಪಕ್ಷಿ ಗಿಳಿಯನ್ನು ಕುರಿತು ಕಾವ್ಯದಲ್ಲಿ ಪಕ್ಷಿ ಸಂಸ್ಕೃತಿ ಹಾಗೂ ಗಿಳಿಯ ಪೂರ್ವ ಜನ್ಮವೃತಾಂತ ಕಥೆಯನ್ನು ಒಡಮೂಡಿಸುವಲ್ಲಿ ಹಾಗೂ ಪ್ರಕೃತಿ ಪಕ್ಷಿ ಪ್ರಿತಿಯ ಭಾವವನ್ನು ಅಭಿವ್ಯಕ್ತ ಪಡಿಸುತ್ತಾನೆ.

*೧ ಕ.ಸಾ.ಚ.– ರಂ.ಶ್ರೀ. ಮುಗಳಿ ಪು. ಸಂ. – ೧೩೧*

## ದುರ್ಗಸಿಂಹ :

೧೧ನೇ ಶತಮಾನದ ಮೊದಲರ್ಧದಲ್ಲಿ ಚಾಲುಕ್ಯ ರಾಜ್ಯ ಜಗದೇಕಮಲ್ಲ ಜಯಸಿಂಹನ ಬಲ ದಂಡನಾಯಕನು, ಸಂಧಿವಿಗ್ರಹಿಯೂ ಆಗಿ, ಪಂಪಾದಿಗಳಂತೆ ಸವ್ಯಸಾಚಿಯಾದ ಕವಿ ಇವನು ಮೇಲಾಗಿ ಪರಮಾತ್ಮನಂ, ಪರಮೇಶ್ವರಂ, ಮುರಹರಂ ದೈವಂ. ಮಹಾಯೋಗಿಯೇಳ್ ಎಂಬ ಗುರು ಶಂಕರ ಭಟ್ಟರ್ ಎಂದು ಅವನು ಹೇಳಿದಂತೆ ಪಂಡಿತ ಕುಲದಲ್ಲಿ ಹುಟ್ಟಿದ ಊರು ಸಯ್ಯಡಿಯಲಿ? ಬಾಳಿ ಬದುಕಿದ ಕವಿ.

ದುರ್ಗಸಿಂಹನು ಅತ್ಯಂತ ಪ್ರಮುಖವಾದ ಕೃತಿ 'ಪಂಚತಂತ್ರ' ಕಥೆಗಳು, ಈ ಕೃತಿಯಲ್ಲಿಯ ಕಥೆಗೆಳು ಪ್ರಾಣೀ, ಪಶು, ಪಕ್ಷಿ, ಸಸ್ಯ, ಪ್ರಕೃತಿಯ ಹತ್ತು ಹಲವಾರು ಜೀವ ಸಂಕುಲ ಸಸ್ಯ ಸಂಕುಲಗಳಿಗೆ ಅನ್ವಯಿಸುವ ಕಥೆಗಳನ್ನು ಒಳಗೊಂಡಿದೆ. ಈ ಕಥೆಗಳು ಗದ್ಯ ಸ್ವರೂಪವನ್ನೊಳಗೊಂಡಿದ್ದು, ಸರಳ ಶೌಲಿಯಲ್ಲಿ ಕಥೆಯನ್ನು ಹೆಣೆದ್ದಿದಾನೆ. [೨]

ಪಶು ಪಕ್ಷಿ ಸಂಬಂಧವಾದ ಸಾಂಕೇತಿಕ ಕಥೆಗಳಿಂದಲೂ ಅದರ ಅತರಂಗವು ಭಿನ್ನವಾಗಿದೆ ಪ್ರಾನಿ ಪಕ್ಷಿಗಳ ಮೂಲಕ ಮನುಷ್ಯನಿಗೆ ನೀತಿಯನ್ನು ಹೇಳುವ ಕಥೆಗಳು ಆಕರ್ಷಣೀಯವಾಗಿವೆ, ಈ ಕಥೆಗಳಲ್ಲಿ ಪ್ರಾಣಿ ಪಕ್ಷಿ ಪ್ರಪಂಚ ವಿಶಿಷ್ಟವಾಗಿ ನಿರೂಪಿತವಾಗಿದೆ. ಹೀಗೆ ದುರ್ಗಸಿಂಹನಿಗೂ ಕನ್ನಡ ಸಂಸ್ಕೃತಿಯ ಮೂಲಕ ವಿವರಿಸಿರುವುದು ತಂಬಾ ವಾಸ್ತವವಾಗಿದೆ.

# ನಡುಗನ್ನಡ ಕಾಲ :

೧೨ನೇ ಶತಮಾನದಲ್ಲಿ ಸಾಮಾಜಿಕ, ಧಾರ್ಮಿಕ, ಸಂಸ್ಕೃತಿಕ, ಪ್ರಕೃತಿಕ, ಆರ್ಥಿಕ, ಇತ್ಯಾದಿ ಸಂಗತಿಗಳ ಚಲನೆಗಾಗಿ ಅದ್ಭುತ ವಿಚಾರ ಕ್ರಾಂತಿ ಜರುಗಿದೆ. ಮಹತ್ವದ ಧೋರಣೆಗಳ ಅಡಿಯಲ್ಲಿ ನಿಂತ ಒಂದು ಘಟ್ಟ ಎಂದು ನಾವು ಹೇಳಬಹುದು.

## ಜೇಡರ ದಾಸಿಮಯ್ಯ :

ಪ್ರಕೃತಿಯ ಜಗತ್ತನ್ನು ಜನಸಾಮನ್ಯರ ಕಲ್ಯಾಣಕ್ಕಾಗಿ ಬಳಸಿಕೊಂಡಿದ್ದು ವಚನ ಸಾಹಿತ್ಯದ ವೈಶಿಷ್ಟ್ಯವೆನ್ನಬಹುದು ವಚನಕಾರರು ಪ್ರಕೃತಿಯ ಚರಾಚರ ಸಂಕುಲನ್ನು ಕುರಿತು ಹಲವಾರು ರಿತಿಯಲ್ಲಿ ತಮ್ಮ ಅನುಭವಗಳನು ಅಭಿವ್ಯಕ್ತ ಪಡಿಸಿದರು. ಮೊಟ್ಟ ಮೊದಲ ವಚನಕಾರ ಜೇಡರ ದಾಸಿಮಯ್ಯನ ಒಂದು ವಚನ.

*೨ ಕ.ಸ.ಚ ರಂ. ಶ್ರೀ ಮುಗಳಿ ಪು. ಸಂ ೧೩೧*

ಕರಿಯನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ,
ಹಿರಿದಪ್ಪ ರಾಜ್ಯವಿತ್ತೊಡೆ ಒಲ್ಲೆ, ನಿಮ್ಮ ಶರಣರ
ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿನ್ನನಿತ್ತೆ
ಕಾಣಾ ರಾಮನಾಥ.

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೧೭*

ದಾಸಿಮಯ್ಯನ ಮೇಲ್ಕಂಡ ವಚನದಲ್ಲಿಯ 'ಆನೆ' ಎಂಬ ಪ್ರಾಣಿಯನ್ನು ಕುರಿತು ಹೇಳುತ್ತ ಅದರ ಬೃಹತ್ ಆಕಾರದ ಭಾವ ರಾಜ ಪರಿವಾರದ ಸೂಚನೆ ಅಭಿವ್ಯಕ್ತಗೊಂಡಿದೆ. ಪ್ರಾಚಿನ ಕಾಲದಲ್ಲಿ ಆನೆಯನ್ನು ದಾನವಾಗಿ ನೀಡುವ ಕಾಲವಿತ್ತು. ಹಾಗೆಯೇ ನಮ್ಮಲ್ಲಿ ಬೆಳೆದು ಬಂದ ಪ್ರಾಚೀನ ಸಂಸ್ಕೃತಿ ಸಂಪ್ರದಾಯವು ಇಲ್ಲಿ ಕಾಣುತ್ತದೆ.

ಆನೆಯ ಸಂಕೇತ ವಚನಗಳಲ್ಲಿ ಮೂಡಿ ಬಂದಿರುವುದು ಪ್ರಾಣಿ ಪ್ರಿಯತೆಯ ಭಾವಕ್ಕಿಂತ ಅ ಕಾಲದ ಅದರ ಅಹತ್ತನ್ನು ವಚನಕಾರ ಇಲ್ಲಿ ಸುಂದರವಾಗಿ ಮೂಡಿಸಿದ್ದಾನೆ. ವಚನದ ಸಾರವನ್ನು ನೋಡಿದಾಗ ಶವಶರಣರು ಆನೆ, ಸಿರಿ ಸಂಪತ್ತು ಹಿರಿದಾದ ರಾಜ್ಯ ಬಯಸಿದವರಲ್ಲ ಶಿವಶರಣರ ಸತ್ಯವಚನಗಳನ್ನು ಬಯಸಿದರು ವಚನಗಳನ್ನೇ ಅಮೃತವಾಗಿ ಸ್ವಿಕರಿಸಿದರು, ಸದ್ವಚನವೇ ಸಕಲ ಜಪ ತಪಗಳಾಗಿದ್ದವು. ವಚನಗಳಲ್ಲಿ ಶಿವಶರಣರು ಸಾಕ್ಷತ್ ಶಿವನನ್ನೇ ಹಾಡಿ ಅನಂದಿಸಿ ಅನುಭವಿಸಿದರು. ಈ ಸಂದರ್ಭದಲ್ಲಿ ಆನೆಯ ದೃಷ್ಟಾಂತವಿದೆ.

ದಾಸಿಮಯ್ಯನ ಇನ್ನೊಂದು ವಚನವನ್ನು ನಾವಿಲ್ಲಿ ಗಮನಿಸಬಹುದು

ಆಡಬಾರದ ಬಯಲು, ನೋಡಬಾರದ ಬಯಲು,
ನುಡಿಯ ಬಾರದ ಬಯಲು, ಹಿಡಿಯಬಾರದ ಬಯಲು,
ಈ ಒಡಲಿಲ್ಲದ ಬಯಲೋಳಗೆ ಅಡಗಿರ್ದ ಭೇದವ
ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ,

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೨೦*

"ಒಡಲಿಲ್ಲದ ಬಯಲು" ಬಯಲು ಎಂದರೆ ವಿಶಾಲಕರವಾದ ಭವ್ಯ ಬೆಳದಿಂಗಳು, ಶಿವಶರಣರು ವಿಶಾಲವಾದ ಬ್ರಹ್ಮಾಂಡದ ಮೇಲೆ ಭವ್ಯವಾದ ಪ್ರಕೃತಿಯ ಬಯಲು ಬೆಳದಿಂಗಳನ್ನು ಕಂಡು ಅ ಬೆಳದಿಂಗಳೊಳಗೆ ಅದ್ಭುತವಾದ ಒಂದು ಚಿದ್ಬೆಳಗು ಅಗೋಚರವಾದದನ್ನು ತಿಳಿಸಿದ್ದಾರೆ ಅದೊಂದು 'ದಿವ್ಯಶಕ್ತಿ' ಪ್ರಮಾತ್ಮ ಎಂಬುದು ಇಲ್ಲಿಯ ಅರ್ಥ, 'ಬಯಲು' ಚಿತ್ರ ಇಲ್ಲಿ ಶ್ಲೇಷಾರ್ಥದಲ್ಲಿ ಬಲಕೆಯಾಗಿದೆ ದೈವವನ್ನು

ಅಂತರಂಗಿಕವಾಗಿ ಕಂಡು ಅನುಭವಿಸಿ ಆನಂದಿಸಿದರು ಶರಣರು. ಪ್ರಕೃತಿ ಅವರಿಗೆ ಒಂದು ಬದುಕಿನ ಒಂದು ಆಶ್ರಯ ತಾಣವಾಗಿತ್ತು. ಅಷ್ಟೆಯಲ್ಲ ದೇವನು ವಾಸಿಸುವ ಸುಂದರತಾಣ ಗಿಡಮರ, ನೊರೆವಾಲೊಳಗಿರುವ ಅಮೂಲ್ಯವಸುವನ್ನು ಎತ್ತಿ ತೋರಿಸುವ ಕವಿ, ಹಾಗೇಯೇ ಶರಿರದಲ್ಲಿರುವ ಅತ್ಮವನ್ನು ವಿವರಿಸಿದ್ದಾನೆ.

ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪದ ಕಂಪಿಲ್ಲದಂತಿರಿಸಿದೆ
ಶರಿರದೊಳಗಾತ್ಮನ ಕಾಣದಂತಿರಿಸಿದೆ ನೀ
ಬೆರೆಸುವ ಭೇದಕೆ ಬೆರಗಾದೆನಪ್ಪ ರಾಮನಾಥ

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೨೨*

ಸಸ್ಯ ಸಂಸ್ಕೃತಿಯಲ್ಲಿಯ ಒಂದಾದ 'ಮರ' ಪ್ರಕೃತಿಯ ಅದ್ಭುತ ಶಕ್ತಿಗಳಲ್ಲೊಂದು ಮರದಲ್ಲಿಯ ಅಡಗಿರುವ ಅಗ್ನಿ ಅದು ಅಗೋಚರ ಸ್ವರೂಪದ್ದು 'ಮರ' ಇಲ್ಲಿ ಪ್ರತಿಮಾ ಸಂಕೇತ ರೂಪದಲ್ಲಿ ಬಳಸಿಕೊಂಡಿರುವುದು ಪ್ರಮುಖವಾದ ಸಂಗತಿ ಮರದಲ್ಲಿರುವ ಬೆಂಕಿ ಅಡಗಿರುವಂತೆ ಶರೀರದಲ್ಲಿರುವ ದೇವರ ಸ್ವರೂಪ ಅಗೋಚರ ಎಂಬ ಭಾವ ಅಭಿವ್ಯಕ್ತ ವಾಗುತ್ತದೆ ಇದೊಂದು ಸುಂದರ ವಚನ.

ಹರ ತನ್ನ ಭಕ್ತರ ತಿರಿವಂತೆ ಮಡುವ
ರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರೆದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿ
ಕೊಂಬ ನಮ್ಮ ರಾಮನಾಥ

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೩೯*

ಮೇಲಿನ ವಚನದಲ್ಲಿ ಪ್ರಕೃತಿಗನ್ವಯಿಸುವ ಸಸ್ಯ ಸಂಸ್ಕೃತಿ ವ್ಯಕ್ತವಾಗಿದೆ ವಚನ ನೋಡಿದಾಗ ಚಂದನವು ಸುಗಂದವಾದ ದ್ರವ್ಯರಾಶಿಯನ್ನು ಸೂಸುವ ಸಸ್ಯ ರಾಶಿಗಳಲ್ಲೊಂದು ಕಬ್ಬು ಸಿಹಿ ಕೊಡುವ ಸಸ್ಯಸಂಕುಲಕ್ಕೆ ಸೇರಿದ್ದು ಈ ಸಸ್ಯಗಳ ರೂಪಕ ಇಲ್ಲಿ ಸುಂದರವಗಿದೆ ಇದರ ಹೋಲಿಕೆ ಅದ್ಭುತವಾಗಿ ಪ್ರಯೋಗಿತವಾಗಿದೆ. ದೇವರು ತನ್ನ ಭಕ್ತನಲ್ಲಿಯ ಸುಜ್ಞಾನ ಭಾವವನ್ನು ವರೆಗೆ ಹಚ್ಚುತ್ತನೆ ಆತನು ಬೆಚ್ಚದೆ ಇದ್ದಾಗ ಅವನನ್ನು ಅಪ್ಪಿಕೊಳ್ಳುತ್ತಾನೆ ಎಂಬ ಭಾವ ಇಲ್ಲಿದೆ.

ಈ ಎರಡು ಸಸ್ಯಗಳ ಶ್ರೇಷ್ಠಗುಣ, ಅವುಗಳನ್ನು ಪರೀಕೆಗೊಳಪಡಿಸಿ ಹಿಂಡಿದಾಗ ಅವು ತಮ್ಮ ವಿಶಿಷ್ಠ ಗುಣವನ್ನು ಪ್ರಕಟಿಸುತ್ತವೆ. ಹಗೇಯೆ ಮನ್ಯುಷ್ಯ ಈ ಹೊಲಿಕೆ ಚನ್ನಾಗಿದೆ.

## ಅಲ್ಲಮ ಪ್ರಭುದೇವರ ವಚನ :

ಪ್ರಭುದೇವರ ವಚನಗಳಲ್ಲಿ ಪ್ರಾಣಿ, ಪಕ್ಷಿ, ಬೆಟ್ಟ, ಪುಷ್ಪ, ಸಮುದ್ರ, ಇತ್ಯಾದಿ ಪ್ರಕೃತಿ ದತ್ತವಾದ ಅಂಶಗಳು ಸುಂದರವಾಗಿ ಮೂಡಿ ಬಂದಿದೆ.

ಕೊಟ್ಟ ಕುದುರೆಯನೇರಲಯದೆ
ಮತ್ತೊಂದು ಕುದುರೆಯ ಬಯಸಿವವನು
ವೀರರೂ ಅಲ್ಲ ಧೀರರೂ ಅಲ್ಲ
ಇದು ಕಾರಣ, ಮೂರು ಲೋಕವೆಲ್ಲಾ
ಹಲ್ಲಣವ ಹೊತ್ತುಕೊಂಡು ಬಳಯುತ್ತೈದಾರೆ ಗುಹೇಶ್ವರ

*ಬಕ್ತವಾಣಿ ಇಟಗಿ ಈರಣ್ಣ ಗು.ವಿ.ಗು ಪು.ಸಂ ೫೦*

ಮೇಲಿನ ವಚನದಲ್ಲಿ 'ಕುದರೆ' ಎಂಬ ಪ್ರಾಣಿಯನ್ನು ಕುರಿತು ಉಲ್ಲೇಖವಿದೆ 'ಕೊಟ್ಟ ಕುದುರೆ' ಯನ್ನು ಹತ್ತಿ ತನ್ನ ಗುರಿ, ಸಾಧನೆ, ಮಾಡಬೇಕು ಎಂದು ಅರ್ಥ, ನಿಜ ವೀರನಾದವನು ಇಹಲೋಕದಲ್ಲಿ ಇಲ್ಲಿ ಜಯಿಸುವ ಸಾಹಸಿಗನಾಗಬೇಕು, ಅದನ್ನು ಬಿಟ್ಟು ಅಲಸ್ಯದಿಂದ ಹಿಂಜರಿಯಬಾರದು ಕೊಟ್ಟ ಕುದುರೆಯಿಂದ ತನ ಗುರಿ(ಬದುಕು)ಯನ್ನು ಮಾಡದೆ ಮತ್ತೊಂದು ಕುದುರೆ ಬಯಸುವವನು ವೀರನೂ ಅಲ್ಲ ಧೀರನೂ ಅಲ್ಲ, ಇದಾಗದಿದ್ದರೆ ಜೇನನ್ನು ತಾನು ಹೊತ್ತುಕೊಂಡು ಅಲೆದಾಡುವ ಪಾಡು ಅವನದಾಗುತ್ತದೆ. ಇಲ್ಲಿ ಕುದುರೆ ಎಂಬ ಪ್ರಾಣಿಯು ಒಂದು ಸಂಕೇತವಾಗಿ ದೃಷ್ಟಾಂತ ರೂಪದಲ್ಲಿದೆ ಮನುಷ್ಯ ತನಗೆ ದೊರೆತ ಅವಕಾಶವನ್ನು ಉಪಯೋಗಿಸಿ ಕೊಳ್ಳಬೇಕು ಬೆರೆಯದಕ್ಕೆ ಆಶಿಸಬಾರದೆಂಬ ಪ್ರಜ್ಞಾಪ್ರತೀಕವಾಗಿ ಕುದುರೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮೇರುವ ಸಾರಿದ ಕಾಗೆ ಹೊಂಬಣ್ಣವಾಗದಿರ್ದಡೆ
ಆ ಮೇರುವಿಂದತ್ತಣ ಹುಲು ಮೊರಡಿಯೇ ಸಾಲದೇ?
ದೇವಾ ನಿಮ್ಮ ಪೂಜಿಸಿ ಧಾವತಿ ಗೊಂಬಡೆ
ಆಧಾವತಿಯಿಂದ ಮುನ್ನಿನ ವಿಧಿಯೇ ಸಾಲದೆ ?
ಗುಹೇಶ್ವರ ನಿಮ್ಮ ಪೂಜಿಸಿ ಸಾವಡೆ
ನಿಮ್ಮಿಂದ ಹೊರಗಣ ಜವನೇ ಸಾಲದೇ ?

*ಬಕ್ತವಾಣಿ ಇಟಗಿ ಈರಣ್ಣ ಗು.ವಿ.ಗು ಪು.ಸಂ ೫೧*

ಈ ವಚನವು ಪ್ರಕೃತಿಯ ಸಸ್ಯ, ಪ್ರಾಣಿ ಸಂಕುಲವನ್ನು ಸಂಕೇತಿಸುವ ವಚನವಾಗಿದ್ದು, ಮೇರು ಪರ್ವತ ಎಂದ ಕಾಗೆ ತನ್ನ ನಿಜ ಕಪ್ಪು ಬಣ್ಣವನ್ನು ಅಳಿದು ಬಂಗಾರದ ಬಣ್ಣವಾಗುವಂತೆ ತಾನು ಪರ್ವತ ಎರಿದರೆ ನಿಜ ಬಣ್ಣ ಅಳಿಯದು, ಇಲ್ಲಿ ಪಕ್ಷಿಯ ಸಂಕೇತವು ವಚನಕಾರರು ಸುಂದರವಾಗಿ ಬಳಸಿಕೊಂಡಿದ್ದಾರೆ. ಹಾಗೆಯೇ ಕಾಗೆ ತನ್ನ ಬಣ್ಣ ಬದಲಾಗದಿದ್ದಲ್ಲಿ ಸಣ್ಣ ಹುಲ್ಲು ಕಡ್ಡಿಯೇ ಮೇಲಲ್ಲವೆ? ಎಂದು ನಿಜ ಭಕ್ತಿಯಿಂದ ಕ್ಷಣಕಾಲವೇ ನೆನೆದರೆ ಅದೆ ಹಿರಿದು ಅಲ್ಲದೇ ಆಡಂಬರದ ಪೂಜೆ ಮಾಡಿ ಅಯಾಸ ಗೊಳ್ಳುವುದರಲ್ಲಿ ಅರ್ಥವಿಲ್ಲ ಎಂಬ ಭಾವ ಪ್ರತಿಬಿಂಬಿತವಾಗಿದೆ.

## ಬಸವಣ್ಣನ ವಚನ :

ಪ್ರಕೃತಿಯನ್ನು ಅತ್ಭುತವಾಗಿ ಬಳಸಿಕೊಂಡು ತನ್ನ ಧಾರ್ಮಿಕ ಸಮಾಜಿಕ ಪ್ರಜ್ಞೆಯನ್ನು ಅಭಿವ್ಯಕ್ತಗೊಳಿಸುವುದಲ್ಲಿ ಬಸವಣ್ಣ ಅಗ್ರಗಣ್ಯರು ಹಾಗೂ ಅವರ ನೂರರು ವಚನಗಳು ಪ್ರಕೃತಿಕ ಸೌಂದರ್ಯದಿಂದ ನಿರೂಪಿತವಾಗಿವೆ.

ಅಂತರಂಗ ಶುದ್ದವಿಲ್ಲದವರೊಳಗು
ಅತ್ತಿಯ ಹಣ್ಣಿನಂತೆ ಕ್ಷುದ್ರ ಬಿಡದು ನೋಡಾಯ್ಯ
ಅಂತರಂಗ ಶುದ್ದವುಳ್ಳವರೊಳಗು
ಬಾಳೆಯ ಹಣ್ಣಿನಂತೆ ಸುಗುಣ ತೋರುವುದು ನೋಡಯ್ಯ
ಇದು ಕಾರಣ, ಅಂತರಂಗ ಸುದ್ದವಿಲ್ಲದವರ
ಸಂಗದಲ್ಲಿ ಇರಬಾರದು ಶರಣರು

*ಶಿ.ಶ.ಅ. ಸಾಹಿತ್ಯ ಪು.ಸಂ. – ೧೫೦*

ಮೇಲಿನ ವಚನದಲ್ಲಿ 'ಅತ್ತಿಯ' ಹಣ್ಣು ಬಾಳೆಹಣ್ಣುಗಳ ಗುಣ ಸ್ವರೂಪ ಸಂಗತಿ ವ್ಯಕ್ತವಾಗಿದ್ದು ಈ ಸಸ್ಯ ಸಂಸ್ಕೃತಿಯನ್ನು ಬಸವಣ್ಣಾ ತನ್ನ ವಚನದಲ್ಲಿ ಸುಂದರವಾಗಿ ಪ್ರತಿಬಿಂಬಿಸಿದ್ದಾನೆ. ಈ ಸಸ್ಯ ರಾಶಿಯೊಂದಿಗೆ ಮಾನವ ಅಂತರಂಗದ ಶುದ್ದಿಯನ್ನು ಪ್ರತಿಕರಿಸುವುದು ಇಲ್ಲಿ ಅನುಭವಕ್ಕೆ ಪ್ರತೀಕವಾಗಿದೆ.

ಅತ್ತಿಯ ಹಣ್ಣಿನಲ್ಲಿಯ ಹುಳು ತುಂಬುವುದು ಬಾಳೆಯ ಹಣ್ಣು ಸಿಹಿಯ ಸ್ವರೂಪವಾಹಿರುವುದು ಎರಡರ ಸುಂದರ ರೂಪಕದೊಂದಿಗೆ ಮೂಡಿಸಿದ ಭಾವ ಸುಂದರವಾಗಿದೆ ಹಾಗೆ ಈ ಎರಡು ಹಣ್ಣುಗಳ ಹೋಲಿಕೆಯಿಂದ ವ್ಯಕ್ತಿಯ ಅಂತರಿಕ ಗುಣ, ಚಿತ್ತಶುದ್ದತೆ, ಭಾವ ಪ್ರತಿಬಿಂಬಿತವಾಗಿರುವುದು ಮನನೀಯವಾಗಿರುತ್ತದೆ.

ಆನೆಯನ್ನೇರಿಕೊಂಡು ಹೋದಿರೆ ನೀವು
ಕುದುರೆಯನ್ನೇರಿಕೊಂದು ಹೋದಿರೆ ನೀವು

ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ ।
ಸತ್ಯದ ನಿಲುವನರಿಯದೆ ಹೋದಿರಲ್ಲಾ ।
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ
ಅಹಂಕಾರವೆಂಬ ಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ ।
ನಮ್ಮ ಕೂಡಲ ಸಂಗಮ ದೇವರನದೆ
ನರಕಕ್ಕೆ ಭಾಜನವಂದಿರಲ್ಲಾ.

*ಸಮಗ್ರ ಗದ್ಯ – ಜಿ.ಎಸ್. ಶಿವರುದ್ರಪ್ಪ ಪು. ಸಂ. – ೧೧೭*

ಈ ವಚನದ ಮೂಲಕ ಬಸವಣ್ಣನವರು ಲೋಕದ ವ್ಯರ್ಥಜೀವನದ ಕಡೆಗೆ ಬೊಟ್ಟುಮಾಡುತ್ತಾರೆ. ಹಾಗೂ ಆ ಮೂಲಕ ಕನಿಕರದಿಂದ ಮರುಗುವ ರೀತಿಯನ್ನು ಚಿತ್ರಿಸುತ್ತಾರೆ. ಅಹಂಕಾರ ಮೂಲವಾದ ಲೋಕ ವ್ಯಾಪಾರ, ಅದರಿಂದ ವ್ಯರ್ಥ ಜೀವನದ ವಿಷಯ, ಇದರ ವಸ್ತು, 'ಆನೆ' "ಕುದುರೆ" ಇವು ಪ್ರಾಣಿಗಳು ವಚನದಲ್ಲಿ ಅಹಂಕಾರ ಅಧಿಕಾರ, ಭಾವವನ್ನು ಪ್ರತಿಬಿಂಬಿಸುತ್ತವೆ. ಹೀಗೆ ಬಸವಣ್ಣನು ಪ್ರಾಣಿಗಳ ಸಂಸ್ಕೃತಿ ಮೂಲಕ ಲೊಕದ ಒಂದು ಚಿತ್ರ ಕೊಡುತ್ತಾರೆ.

ನಿರ ಕಂಡಲ್ಲಿ ಮುಳುಗುವರಯ್ಯ
ಮರನ ಕಂಡಲ್ಲಿ ಸುತ್ತುವರಯ್ಯ
ಬತ್ತುವ ಜಲದ ಒಣಗುವ ಮರವ
ಮೆಚ್ಚಿದವರು ನಿಮ್ಮನ್ನೆತ್ತ ಬಲ್ಲರು
ಕೂಡಲ ಸಂಗಮದೇವಾ

*ಶಿ.ಶ.ಅ. ಸಾಹಿತ್ಯ ಹೆಚ್.ತಿಪ್ಪೆ ರುದ್ರಸ್ವಾಮಿಪು.ಸಂ. – ೧೩೫*

ಈ ವಚನದಲ್ಲಿ ಪ್ರಕೃತಿಯ ಜಲ, ಮರ, ಇವುಗಳ ಸಂಕೇತವು ಸುಂದರವಾಗಿ ಪ್ರತಿಬಿಂಬಿತವಾಗಿದೆ. ನೀರು ನಿರ್ಜಿವ ಜಡ ಸ್ವರೂಪಕ್ಕೆ ಪ್ರತೀಕ ಹಾಗೆಯೇ ಮರ ಜಡ ಸ್ವರೂಪಿ ಇವೆರಡು ವಸ್ತುಗಳು ನಶ್ವರವಾದವು, ನಿಶ್ಚೇತನ ಸ್ವರೂಪಿಯಾದವು, ನೀರು ಬತ್ತಿ ಹೋಗುತ್ತದೆ ಮರ ನೀರಿಲ್ಲದೆ ಒಣಗುವುದು ಇಲ್ಲಿ ದೇವರ ಸ್ವರೂಪ ಶಕ್ತಿ ಕಾಣದು ಹಾಗೆಯೇ ಮರ ಭಯಂಕರ ಬಿಸಿಲಿನ ತಾಪಕ್ಕೆ ಒಣಗಿ ನಾಶವಾಗುವುದು ಇವೆರಡನ್ನೂ ದೇವರೆಂದು ಪೂಜಿಸುವವರನ್ನು ಕಂಡು ಖಂಡಿಸುತ್ತಾರೆ ಒದೊಂದು ಸೊಗಸಾದ ವಚನ

ಮರವನೇರಿದ ಮಾರ್ಕಟನಂತೆ
ಹಲವು ಕೊಂಬೆಗೆ ಹಾಯುತ್ತಲಿದ್ದೇನೆ
ಬೆಂದ ಮನವ ತಾನೆಂತು ನಂಬುವೆನಯ್ಯ
ಎಂತು ನೆಚ್ಚುವೆನಯ್ಯ । ಎನ್ನ ತಂದೆ ಕೂಡಲ
ಸಂಗಮ ದೇವನಲ್ಲಿಗೆ ಹೋಗಲೀಯದಯ್ಯ,

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೪೪*

ಇಲ್ಲಿಯ ವಚನ 'ಮಾರ್ಕಟ' ಎಂಬ ಪ್ರಾಣಿಗನ್ವಯಿಸುವ ಮಾತು ಅದರ ಚಂಚಲತೆಯನ್ನು ನಿರೂಪಿಸುತ್ತದೆ 'ಮಾರ್ಕಟ' ಪ್ರಾಣಿಯ ಚಂಚಲತೆಯ ಸ್ವಭಾವವು ಭಕ್ತನ ಮನದ ಹೊಯ್ದೋಟಕ್ಕೆ ಹೋಲಿಕೆಯಾಗಿದೆ ಇಲ್ಲಿ ಪ್ರಕೃತಿಯಲ್ಲಿಯ ಪ್ರಾಣಿ ಗುಣ ಅದರ ಸಂಸ್ಕೃತಿ ವಚನದೊಂದಿಗೆ ಸಮೀಕರಿಸುವರೋದಿಗೆ ಪ್ರಾಣಿಯ ಮನವನ್ನು ಮಾನವನ ಚಂಚಲಕ್ಕೆ ಜೋಡಿಸಿರುವ ಚಿತ್ರ ಹೃದಯಂಗಮವಾಗುತ್ತದೆ.

ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೇ ।
ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ ।

ಗಗನವನಡರಿದ ಕಾಗೆಯಂತೆ ದೆಸೆ ದೆಸೆಗೆ ಹಂಬಲಿಸದಿರಾ ಮನವೇ ।
ಕೂಡಲ ಸಂಗನ ಶರಣರ ಕಂಡು ಲಿಂಗವೆಂದೆ ನಂಬು ಮನವೇ ।

*ಶ.ಅ.ಸಾ ತಿಪ್ಪೇರುದ್ರಸ್ವಾಮಿ ಪು.ಸಂ. ೧೫೩*

ಇದೊಂದು 'ಉಪಮಾನ' ಪ್ರಧಾನವಾದ ವಚನ್ ಇಲ್ಲಿ ಮೂಡಿ ಬಂದ ಪ್ರಾಣಿ ಸಂಕುಲದ ನರಿ,ಕೋಡಗ, ಕಾಗೆ, ಪ್ರಕೃತಿಯ ಜೀವ ಸಂಕುಲದ ವಿಶಿಷ್ಟ ಗುಣ ಹೊಂದಿರುವಂತಹವುಗಳು ಅವುಗಳ ಚಂಚಲತೆ ಹಾಗೂ ಅಶೆಬುರುಕುತನ ವ್ಯಕ್ತವಾಗುವದರೊಂದಿಗೆ ಮಾನವನ ಮನದ ಚಿತ್ರವನ್ನು ಹಿಡಿಯಲಾಗಿದೆ. 'ಬೆಲ್ಲವ ತಿಂದ ಮಂಗ' 'ಕಬ್ಬು ತಿಂದ ನರಿ' ಇವುಗಳ ಮನದ ಆಸೆ ಚಂಚಲತೆಯ ಭವ ಕುರಿತು ಭಕ್ತನ ಮನಸ್ಸಿನ ಚಂಚಲತೆಯ ಸ್ವರೂಪದ ಹೋಲಿಕೆ ಇಲ್ಲಿ ಕಾಣುತ್ತದೆ ಆದ್ದರಿಂದ ಬಸವಣ್ಣನ ಮನವು ಲಿಂಗವೆಂಬ ಭಾವವು ಒಂದಡೆ ನಿಲಿಸುವ ಚಿತ್ ಶಕ್ತಿ ಅವನಲ್ಲಿ ಇರದೆ ಇರುವುದನ್ನು ಇದು ಪ್ರತಿಬಿಂಬಿಸುತ್ತದೆ. ಹೀಗೆ ಪಕ್ಷಿ ಸಂಕೇತದ ಕಾಗೆ ಆಕಾಶದಲ್ಲಿ ಹಾರಾಡುತಲ್ಲಿದ್ದು ಅದು ಆಕಾಶದ ತುಂಬಾ ದೆಸೆ ದೆಸೆಗೆ ಸುತ್ತುವ ಮನದ ಹಾಗೆ ಚಂಚಲತೆಯು ಇರುವುದರ ಚಿತ್ರಣ ಆಕರ್ಷಕ ವಾಗಿದೆ.

## ಶಿವಯೋಗಿ ಸಿದ್ದರಾಮನ ವಚನ :

ಕಾಯಕಯೋಗಿ ಸಿದ್ದರಾಮನ ವಚನಗಳಲ್ಲಿಯ ಮೂಡಿ ಬಂದ ಪ್ರಕೃತಿಯ ಪಕ್ಷಿ ಸಂಕುಲ ಸಸ್ಯ ಸಮುದ್ರ ಇತ್ಯಾದಿ ಅಂಶಗಳನ್ನೊಳಗೊಂಡ ವಚನ.

ಕ್ಷೀರಶರಧಿಯಲ್ಲಿರುವ ಹಂಸಗೆ
ಅನ್ಯ ಕ್ಷೀರದ ಹಂಗುಂಟೇನಯ್ಯ ?
ಸುಗಂಧಮಯ ಪುಷ್ಪದಲ್ಲಿರುವ ಬೃಂಗಂಗೆ
ಅನ್ಯ ಪರಿಮಳದ ಹಂಗುಂಟೇನಯ್ಯ ?
ಸಮುದ್ರದೊಳಗಿರುವ ಮಂಡುಕಂಗೆ
ಅಂಬುವಿನ ಹಂಗುಂಟೇನಯ್ಯ ?
ಮೊಲೆಯ ನುಣ್ಣುವ ಶಿಶುವಿಂಗೆ
ಅನ್ಯ ಕ್ಷೀರದ, ನೀರಿನ ಹಂಗುಂಟೇನಯ್ಯ ?

ಸಕಲ ಸಂಪ್ರದಾಯಕ ಲಿಂಗದೊಳಿದ್ದ ಶರಣಂಗೆ
ಅನ್ಯ ಪರದಾಸೆಯ ಹಂಗುಂಟೇ ಹೇಳಾ?
ಕಪಿಲ ಸಿದ್ದ ಮಲ್ಲಿಕಾರ್ಜುನಾ,

*ಶ.ಅ. ಸಾಹಿತ್ಯ ಹೆಚ್. ತಿಪ್ಪೇರುದ್ರಸ್ವಾಮಿ ಪು.ಸಂ. – ೨೫೨*

ಈ ಮೇಲಿನ ವಚನದಲ್ಲಿಯ ಹಂಸ, ಪುಷ್ಪ, ಭ್ರಮರ, ಮಂಡಕ ಪರಿಮಳಪುಷ್ಪ, ಕಮಲ, ಈ ಪ್ರಕೃತಿಯ ಸಸ್ಯ ಜೀವ ಸಂಕುಲಗಳಲ್ಲಿ ಅವುಗಳ ಸಂಸ್ಕೃತಿಯು ಅನು ಭಾವಿಕರಿಸಿದುದು ಸುಂದರವಾಗಿ ಮೂಡಿ ಬಂದಿದೆ, ಕ್ಷೀರದ ಸಮುದ್ರದಲ್ಲಿರುವ ಹಂಸಕ್ಕೆ ಅನ್ಯಹಾಲಿನ ಕಡೆ ಹೇಗೆ ಒಲವಿರಲಾರದೋ, ಬ್ರಮರ ಸುಗಂದವಾದ ದ್ರವ್ಯ ಸೂಸುವ ಪರಿಯನುಂಡು ಆನಂದಿಸುವಲ್ಲಿ ಅದರ ಮನಸು ಇನ್ನೊಂದು ಪುಷ್ಪದ ಸುಗಂದದ ಕಡೆ ಹೇಗೆ ಎಳೆಸದು, ಹೇಗೆ ಸಮುದದ್ರ, ಕಪ್ಪಗೆ ನೀರಿನ ಹಂಗಿಲ್ಲವೋ ಹಗೆ ಲಿಂಗದ ಧ್ಯಾನದಲ್ಲಿದ್ದ ಶರಣನಿಗೆ ಪರದಾಸೆಯಿಲ್ಲ ಎಂಬುದು ಈ ವಚನದ ಹೇಳಿಕೆ. ಇಲ್ಲಿ ಪ್ರಕೃತಿಯ ವಸ್ತುಗಳೊಂದಿಗೆ ಭಕ್ತನ ಭಾವ ಶರಣ ಮನದ ಸ್ಥರಗಳನ್ನು ಕಟ್ಟಿಕೋಡಲಾಗಿದೆ.

ಬೀಜ ವೃಕ್ಷದಂತೆ ನೀನಿಪ್ಪೆಯಯ್ಯ
ನಿರಾಕಾರವೇ ಮೂರ್ತಿಯಾಗಿ
ಮೂರ್ತಿಯೇ ನಿರಾಕಾರವಾಗಿ
ಇವೆಲ್ಲವಳಿದು ಬಯಲಾಗಿಪ್ಪೆ
ಎನ್ನ ಕಪಿಲ ಸಿದ್ದ ಮಲ್ಲಿಕಾರ್ಜುನ

*ಶ.ಅ. ಸಾಹಿತ್ಯ ಹೆಚ್. ತಿಪ್ಪೇರುದ್ರಸ್ವಾಮಿ ಪು.ಸಂ. – ೩೦*

ಸಸ್ಯ ಸಂಸ್ಕೃತಿಯ 'ಬೀಜ ವೃಕ್ಷ' ನಾಮವು ಹೇಗಿದೆ ಬೀಜದಲ್ಲಿರುವ ವೃಕ್ಷವು ಅಗೋಚರ ಸ್ವರೂಪದ್ದು ವೃಕ್ಷ ಗೋಚರಿಸುವಂತೆ ಬೀಜವು ಮಾಯವಾಗಿರುತ್ತದೆ ಹಾಗೆಯೇ ಭಕ್ತ ಭಗವಂತ ಅಗೋಚರ ಸ್ವರೂಪಿ ಭಗವಂತನು ಲೋಕ ಕಲ್ಯಾಣ ಕರ್ತೃ ನಿರಾಕಾರ ಸ್ವರೂಪಿಯಾದ್ದಾನೆ ಹಾಗೂ ಸಕಾರ ಸುಂದರವಾದ ರೀತಿಯಲ್ಲಿ ಬಳಕೆಯಾಗಿದೆ ಹೆಚ್ಚು ಶಾಸ್ತ್ರ, ವಚನಗಳನ್ನು ರಚಿಸಿರುವ ಚನ್ನಬಸವಣ್ಣ ಜ್ಞಾನಿ. ಶಿವನು ಬಯಲಲ್ಲಿ ಬಯಲಾಗಿ ಹೋಗುತ್ತಾನೆ. ಹಾಗೆಯೇ ಇಲ್ಲಿ ಪ್ರಕೃತಿಯ ಸಸ್ಯ ಸಂಸ್ಕೃತಿ ಬಯಲು ಸ್ವರೂಪ, ಎರಡು ಸುಂದರವಾಗಿ ಮೂಡಿ ಬಂದಿವೆ.

## ಚನ್ನಬಸವಣ್ಣ ವಚನ :

ಅವನ ವಚನಗಳಲ್ಲಿ ಮೂಡಿ ಬಂದಿರುವ ಪ್ರಕೃತಿ ಪ್ರಾಣಿ ಸಂಕುಲ ವಿಶಿಷ್ಟವಾಗಿವೆ.

ಹೆಗ್ಗಣವನಿಕ್ಕೆ ನೆಲಗಟ್ಟು ಕಟ್ಟಿದಂತೆ ಆಯತ್ತೆನ್ನ ಕಾಯಗುಣ
ಅಹಂಕಾರ ಪ್ರಭೋಧೆಗಳೇಕಯ್ಯ? ಕಾಮ ಕ್ರೋದ ಲೋಭ
ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ
ಎನ್ನ ಬಾದಿಸಲಿಂತು ಲಿಂಗಯ್ಯ ತಂದೆ ?
ಆದಿ ವ್ಯಾದಿಗಳೆಲ್ಲವ ಕಳೆದು ನಿರ್ವಾಣನಪ್ಪ
ಪದವ ಕರುಣಿಸಯ್ಯ ಕೂಡಲ ಚನ್ನ ಸಂಗಮದೇವಾ,

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೩೬*

ಇಲ್ಲಿ 'ಹೆಗ್ಗಣ' ಎಂಬ ಪ್ರಾಣಿಯನ್ನು ಸಂಕೇತಿಸಿದ ವಚನಕಾರ ಆ ಪ್ರಾಣಿಯ ಗುಣ ಸ್ವಭಾವ ಸ್ವರೂಪದ ಚಿತ್ರಣವನ್ನು ಅನುಭಾವಕ್ಕೆ ಸಮಿಕರಿಸಿ ಹೇಳಿದ್ದಾನೆ. ವ್ಯಕ್ತಿಯ ಕಾಯ ಗುಣಗಳನ್ನು ಮೆಟ್ಟಿ ನಿಲ್ಲುವ ಭಾಗವನ್ನು ಪ್ರತಿಬಿಂಬಿಸುವುದರೊಂದಿಗೆ ವಚನ ಮುಂದು ವರೆಯುವುದು ಕಾಮ, ಕ್ರೋದ, ಮದ, ಮತ್ಸರ, ಲೋಭಗಳನ್ನು ಮೆಟ್ಟಿ ನಿಲ್ಲುವ ಭಾವ ಲಿಂಗದಿಂದ ಎಂಬ ಸಂದೇಶವನ್ನು ಪ್ರತಿಬಿಂಬಿಸುತ್ತಾರೆ, ಅಯ್ಯಾ ಲೋಕದ ನಡಾತೆ ನಮಗೆ ಡೊಂಕು,

ತನ್ನ ನಡತೆ ಲೋಕಕ್ಕೆ ಡೊಂಕು,
ಊರ ಹೊದ್ದಿ ಕಾಡ ಸೇರ,
ಅಪ್ಯಾಯನ ವಿರಹಿತ ಶರಣ ಕಪಾಲದೊಳು
ಉಲುಹಡಗಿದ ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ
ಒಂದಾದ ಪರಮಲಿಂಗೈಕ್ಯವು

*ವ.ಧ.ಸಾರ ಎಂ.ಆರ್. ಶ್ರೀನಿವಾಸ ಮೂರ್ತಿ ಪು.ಸಂ. ೫೯*

ಚನ್ನಬಸವಣ್ಣನವರು ಕಾಡು, ಸಮಾಜದ, ಸಂಸ್ಕೃತಿಯನ್ನು ಪ್ರತಿಬಿಂಬಿಸುವ ವಚನವಿದು ಸಮಾಜದಲ್ಲಿ ಬದುಕುವ ವ್ಯಕ್ತಿಯೋಬ್ಬನು, ತಾನು, ಸಮಾಜ, ಸಮಾಜದಲ್ಲಿ ತನ್ನದೆಯಾದ ಅಂದ ಬದುಕಿನ ಚಿಂತನೆ ಮಾಡುತ್ತಾನೆ. ಹೊರತು ಸಮಾಜ ಪರಿವರ್ತಿಸಿದಂತೆ ಜನ ಜರೆಯುವ ಭಾವ ಕಂಡು ಬರುತ್ತದೆ. ಅದಕ್ಕೆ ನಾವು ನಮ್ಮ ಬದುಕು ಅಂದ ಚಂದತೆಯನ್ನು ನಾವೇ ಪರಿವರ್ತಿಸಿ ಕೊಂಡಲ್ಲಿ ಸಮಾಜ ಅನುಕರಿಸುವುದು ಇದರಿಂದ ಸಮಾಜದ ಜಂಜಾಟ ತಪ್ಪುವದೆಂದು ಈ ಕಾಡಿನ ಮೂಲಕ ವ್ಯಕ್ತಿಯ ಹೊಲಿಕೆಯನ್ನು ಸುಂದರವಾಗಿ ಪ್ರತಿಬಿಂಬಿಸಲಾಗಿದೆ.

## ಮುಕ್ತಾಯಕ್ಕಳ ವಚನ :

ಮುಕ್ತಾಯಕ್ಕಳ ವಚನಗಳಲ್ಲಿ ಪ್ರಕೃತಿ ಪೀಯತೆ, ಭಾವಹಾಗೂ ಪುಷ್ಪ, ಬೆಂಕಿ, ಚಂದ್ರ, ವಾಯು, ಸಿಡಿಲು, ಸಮಿಕರಿಸಿಕೊಂಡಿರುವುದನ್ನು ಕಾಣಬಹುದು

'ಅಲರೊಳಡಗಿದ ಪರಿಮಳದಂತೆ
ಪತಂಗದೊಳಡಗಿದ ಅನಲನಂತೆ
ಶಶಿಯೊಳಡಗಿದ ಷೋಡಶ ಕಳೆಯಂತೆ
ಉಲಹಡಗಿದ ವಾಯುವಿನಂತೆ
ಸಿಡಿಲೊಳಡಗಿದ ಗಾತ್ರದ ತೇಜದಂತೆ
ಇರಬೇಕಯ್ಯ ಯೋಗ-ಎನ್ನ ಅಜಗಣ್ಣ ತಂದೆಯಂತೆ

*ಶಿ.ಶ.ವ.ಸಪುಟ.ಡಾ॥ ವೀರಣ್ಣ ರಾಜೂರ್ ಪು.ಸಂ. – ೩೨೫*

'ಯೋಗ'ದ ಬಗ್ಗೆ ತಿಳಿಸುವ ವಚನವಿದು ಪ್ರಕೃತಿಯ ಚಿತ್ರಣದ ಮೂಲಕ ಸುಂದರವಾಗಿ ಒಡಮೂಡಿಸಲಾಗಿದೆ ಅದನ್ನು ಪುಷ್ಪದೊಳಗೆ ಅಡಗಿರುವ ಪರಿಮಳ, ಪತಂಗದೊಳಗಿರುವ ಅನಲದಂತೆ ಯೋಗ ಇರಬೇಕೆಂಬ ಭಾವ ಸ್ವರೂಪವನ್ನು ಪ್ರತಿಬಿಂಬಿಸಲಾಗಿದೆ. ಪರಿಮಳವು ಅಗೋಚರ ಅದು ಅನುಭಾವ ಗಮ್ಯವಾದದು, ಹಾಗೆಯೇ ಪತಂಗದೊಳಗಿನ ಅನಲ ಅಗೋಚರವದವುಗಳು ದನಿಯಿಲ್ಲದ ಗಾಳಿಯಂತೆ, ಸಿಡಿಲೊಳಡಗಿದ ಗಾತ್ರದ ತೇಜಸ್ಸಿನ ಹಾಗೆ ಯೋಗ ಅದ್ಭುತವಾದದು ಸಂಪೂರ್ಣ ಬೆರೆಕೆ ಹೊಂದಿಕೊಳ್ಳುವುದು ಪ್ರಕೃತಿಯ ಸಂಸ್ಕೃತಿಯ ಮೂಲಕ 'ಯೋಗ'ದ ರೀತಿಯನ್ನು ಅನನ್ಯವಾಗಿ ಚಿತ್ರಿಸಲಾಗಿದೆ. ಇದೊಂದು ಪ್ರಕೃತಿ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ವಚನ :

ಸಿಡಿಲುಹೊಯ್ದು ಬಾವಿಗೆ ಸೋಪಾನವುಂಟೆ?
ಷಡುವರ್ಣರಹಿತಂಗೆ ಬಣ್ಣವುಂಟೆ?
ಕಡಲ ದಾಟಿದವಂಗೆ ಹರುಗೋಲುಂಟೆ?

ಬಿಡದೆ ಕಟ್ಟಿದ ಒರೆಗೆ ಸಂದಾನವುಂಟೆ?
ಒಡಲಿಲ್ಲದವಂಗೆ ಒಡವೆಯುಂಟೆ?
ನುಡಿಯುಂಟೆ ಎಮ್ಮ ಅಜಗಣ್ಣ ದೇವಂಗೆ

*ಶಿ.ಶ.ವ.ಸಪುಟ.ಡಾ॥ ವೀರಣ್ಣ ರಾಜೂರ್ ಪು.ಸಂ. – ೩೩೫*

ಮೇಲಿನ ವಚನದಲ್ಲಿ ಸಿಡಿಲು, ಬಾವಿ, ಕಡಲು, ಹರಿಗೊಲು, ಎಂಬ ಸಂಕೇತಗಳು ಇದ್ದು ಅವು ತಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಸಿಡಿಲಿನ ಅರ್ಭಟತೆಯಿಂದ ಬಾವಿಯ ಸೊಪಾನಗಳೆಲ್ಲಿ ಉರುಳಿ ಬಿಳುವಂತೆ ಭಕ್ತನ ಮನದ ದುರಾಚಾರ ರೂಪದ ಅರಿಷಡ್ವರ್ಣಗಳು, ಭಗವಂತನ ಅದ್ಭುತ ಶಕ್ತಿಗೆ ಅವು ಅವನಿಂದ ಅಳಿದು ಹೋಗುತ್ತವೆ. ಹಾಗೆಯೇ ಷಡ್ವರ್ಣಗಳು–ಆರು ಬಣ್ಣ ಅರಿತವನಿಗೆ ಮತ್ತೆ ಬಣ್ಣ ಬೇಕೇ? ಹಾಗೆಯೇ ಸಮುದ್ರವನ್ನು ದಾಟಿದವನಿಗೆ ಮತ್ತೆ ಹರಿಗೂಲು ಅಂಬಿಗ ಬೇಕೇ? ಇಲ್ಲ. ಹಾಗೆಯೆ ತನ್ನ ಅಜಗಣನಲ್ಲಿ ನುಡಿಯಿಲ್ಲ ಎಂಬ ಒಂದು ಅಭುಭಾವವನ್ನು ಈ ವಚನ ಕಟ್ಟಿ ಕೊಡುತ್ತದೆ. ಇಲ್ಲಿ ವ್ಯಕ್ತವಾಗಿರುವ ಸಿಡಿಲು. ಬಾವಿ, ಕಡಲು, ಹರಿಗೋಲು, ಮೊದಲಾದ ಸೃಷ್ಟಿಯ ವಸ್ತುಗಳು ಅ ಮೂಲಕ ಅಜಗಣ್ಣನ 'ಅನುಭಾವದ' ವ್ಯಕ್ತಿತ್ವವನ್ನು ಹೃದಯ ಬಿಚ್ಚಿ ತೋರುತ್ತದೆ.

ಮಹಾದೇವಿಯಕ್ಕನ ಪೂರ್ವಕಾಲದ ಸಹಿತ್ಯದಲ್ಲಿ ಸೃಷ್ಟಿಯ ವರ್ಣನೆಯೋಂದಿಗೆ ಆ ಪ್ರಕೃತಿಯಲ್ಲಿರುವ ನೀರು, ಗಿಡ, ಮರ, ಬಳ್ಳಿ, ಅರಣ್ಯ, ಜೀವಿಗಳನ್ನು ಸಾಂಧರ್ಭಿಕವಾಗಿ ಬಳಸಿಕೊಂಡು ಪ್ರಕೃತಿ ದರ್ಶನ, ಪ್ರಾಣಿ ಪ್ರಪಂಚ, ಪಕ್ಷಿಪ್ರೇಮ, ಹಾಗೂ ಸಸ್ಯ ಸಂಕುಲವನ್ನು ಚಿತ್ರಿಸಲಾಗಿದೆ. ರೂಪಕ, ಉಪಮೆ, ದೃಷ್ಟಾಂತ, ಪ್ರತೀಕ ಪ್ರತಿಮೆಗಳು ಇಲೆಲ್ಲಾ ಮನಮೋಹಕವಾಗಿದ್ದು ಅಕ್ಕಮಹಾದೇವಿಯ ಬದುಕು ಹಾಗೂ ಸಹಿತ್ಯಕ್ಕೆ ಹಿನ್ನಲೆಯಾಗಿ ನಿಂತಿವೆ ಎನ್ನಬಹುದು.

# ಅಕ್ಕನ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಪ್ರಕೃತಿ, ಪ್ರಾಣಿ, ಪಕ್ಷಿ ಹಾಗೂ ಸಸ್ಯ ಸಂಕುಲ

ಸಾಹಿತ್ಯಿಕವಾಗಿ ಸಾಂಸ್ಕೃತಿವಾಗಿ ನಮ್ಮ ನಾಡಿನ ಇತಿಹಾಸದಲ್ಲಿ ಅಪೂರ್ವಕವ್ಯಕ್ತಿ ಅಕ್ಕಮಹಾದೇವಿ ಅವಳ ವ್ಯಕ್ತಿತ್ವ ಅವಳ ಕಾವ್ಯದಂತೆ ಕಾಂತಿಮುಕ್ತವಾದದ್ದು, ಸ್ವಾರಸ್ಯವಾದದ್ದು, "ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣು ಅಲ್ಲ" ಎಂಬ ಆ ಯುಗದ ಅಪೂರ್ವ ತಿಳುವಳಿಕೆಯನ್ನು ಅಕ್ಕನ ಸಾಧನೆಯುದು ನೆನಪಿಸುತ್ತದೆ. ಆಕೆಯ ಸಾಹಿತ್ಯಿಕ ಸಾಧನೆ ಐತಿಹಾಸಿಕವಾಗಿಯೂ ಹಾಗೂ ಸತ್ವದ ದೃಷ್ಟಿಯಿಂದಲೂ ಮಹತ್ವ ಪೂರ್ಣವಾದದು, ಕನ್ನಡದ ಪ್ರಥಮ ಹಾಗೂ ಶ್ರೇಷ್ಠ ಕವಿಯಿತ್ರಿ ಆಗಿರುವ ಅಕ್ಕನ ವಚನಗಳು ವಿಶಿಷ್ಟ ಗುಣಗಳಿಂದ ಕೂಡಿವೆ. ಸಮಕಾಲೀನ ಶ್ರೇಷ್ಠ ವಚನಕಾರರ ಸಾಲಿನಲ್ಲಿ ಹಾಗೂ ಒಟ್ಟು ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿಯ ಹೆಸರು ಚಿರಸ್ಥಾಯಿ ಯಾದುದಾಗಿದೆ.

ಈಗಾಗಲೆ ದೊರೆತ ಅವಳ ೩೫೪ ವಚನಗಳಲ್ಲದೇ ಸೃಷ್ಟಿಯ ವಚನ, ಯೋಗಾಂಗ ತ್ರಿವಿದಿ ಹಾಗೂ ಕೆಲವು ಸ್ವರ ವಚನಗಳು ಪ್ರಕಟವಾಗಿವೆ. "ಅಕ್ಕನ ವಚನಗಳು ಅವಳ ಆತ್ಮಚರಿತ್ರೆಯ ಮತ್ತು ವ್ಯಕ್ತಿತ್ವದ ಜೀವಂತ ಮತ್ತು ಜ್ವಲಂತ ಅಭಿವ್ಯಕ್ತಿಯಾಗಿರುತ್ತವೆ", [೧]ವಚನ ಸಾಹಿತ್ಯದಲ್ಲಿ ಅದರಲ್ಲೂ ವಚನ ಕಾರ್ತಿಯರಲ್ಲಿ ಎಂದೂ ಮರೆಯಲಾಗದ ಹೆಸರು ಅಕ್ಕಮಹಾದೇವಿಯದು. ಭಕ್ತಿ ಮತ್ತು ಅನುಭಾವಿಕ ನೆಲೆಯಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿರುವ ಅಕ್ಕ ಮಹಾನ್ ಶರಣೆ ಅವಳ ಸಾಧನೆಯ ಎಲ್ಲ ಹಂತಗಳ ಎಲ್ಲ ಭಾವ ಲಹರಿಗಳು ಅವಳ ವಚನಗಳಲ್ಲಿ ಸಂಚರಿಸಿವೆ. ಅಕ್ಕನ ತೀವ್ರ ವಿರಕ್ತಿ, ಆರ್ತಪ್ರಾರ್ಥನೆ, ಅಧ್ಯಾತ್ಮದ ರೀತಿ, ಪ್ರಣಯಿನಿಯ ವಿಕಳಾವಸ್ಥೆ ಉನಾದ, ವೈರಾಗ್ಯ, ವಿರಹವೇದನೆ ಸಮ್ಮಿಲನದ ಹರ್ಷೋದ್ವೇಗ ಈ ಮೊದಲಾದ ಭಾವನೆಗಳು ಅವಳ ವಚನಗಳಲ್ಲಿ ತೀವ್ರ ಅನುಭಾವಿಕ ನೆಲೆಯಲ್ಲಿ ಪ್ರಕಟವಾಗಿರುವುದು ಸುಸ್ಪಷ್ಟವಾಗಿದೆ.

ಆಧ್ಯಾತ್ಮಕವಾದ ಅದರಲ್ಲೂ ತೀರಮೂರ್ತವಾದ ಭಾವಗಳನ್ನು ವಿವರಿಸುವಾಗ ಅವಳು ಅನುಸರಿಸಿದ ಮಾರ್ಗ ಅನುಪಮವಾದುದು. ಯಾವುದಾದರೂ ಒಂದು ವಿಷಯದ ವಿವೇಚನೆಗೆ ಅಥವಾ ಅನುಭವಕ್ಕೆ ನಿಲುಕಿದ ಸತ್ಯದ ವಿವರಣೆ ಅವಳ ವಚನದ ಉದ್ದೇಶವಾಗಿರುತ್ತದೆ. ಅದನ್ನು ತನ್ನದೇ ಆದ ರೀತಿಯಲ್ಲಿ ಹೇಳಲು ಪ್ರಯತ್ನಿಸುವ ಪರಿ ಮನಮೋಹಕವಾಗುತ್ತದೆ. ಈ ಸಂದರ್ಭದಲ್ಲಿ ಅವಳು ಬಳಸಿಕೊಳ್ಳುವ ಪ್ರಪಂಚದ ವಾಸ್ತವಿಕ ವಸ್ತುವಿನ ಪ್ರತಿರೂಪಗಳು ಆಕೆಯ ವಚನಕ್ಕೆ ಜೀವ ತುಂಬುತ್ತವೆ ಮತ್ತು ಅನುಭಾವಿಕ ಅರ್ಥವನ್ನು ಸ್ಫುರಿಸುತ್ತವೆ.

*೧) ಶಾಂತಾ ಕಡಗದ – ಮಹಾದೇವಿಲಿಕ್ಕ ಸಕಸಾಚ-೩ಬೆಂಗಳೂರ ೧೯೭೬ ಪು-೧೪೫*

ತಾನು ಹೇಳಬಯಸುವ ವಿಷಯ ಪ್ರತಿಪಾದನೆಗಾಗಿ ಅಕ್ಕಮಹಾದೇವಿ ಅದಕ್ಕೆ ಬೇಕಾಗಬಹುದಾದ ಉಪಮಾನ ದೃಷ್ಟಾಂತ, ಹೋಲಿಕೆಗಳನ್ನು ಜೋಡಿಸಿ ವಚನಗಳನ್ನು ಆರಂಭಿಸುತ್ತಾಳೆ. ಅಂತಹುಗಳಲ್ಲಿ ಅವಳು ಆರಿಸಿಕೊಳ್ಳುವ ಪ್ರಕೃತಿಯ ಅಂಗಗಳು, ಪ್ರಾಣಿ, ಪಕ್ಷಿ ಹಾಗೂ ಸಸ್ಯ ಸಂಕುಲದ ಪ್ರತಿಮೆ, ಪ್ರತೀಕಗಳು ತುಂಬಾ ಮಹತ್ವವಾದವುಗಳಾಗುತ್ತವೆ, ಅವಳ ವಚನಗಳಲ್ಲಿ ಸುಮಾರು ೬೦ ಕ್ಕಿಂತ ಹೆಚ್ಚು ವಚನಗಳಲ್ಲಿ ಪ್ರಕೃತಿಯ ದರ್ಶನವು ಅಡಕವಾಗಿದ್ದೆ, ಅನೇಕ ವಚನಗಳಲ್ಲಿ ಪ್ರಾಣಿ, ಪಕ್ಷಿ ಸಸ್ಯ ಪ್ರಪಂಚ ಪ್ರಕಟವಾಗಿದೆ.

ಅಕ್ಕ ವರ್ಣಿಸುವ 'ಪ್ರಕೃತಿ ಸಂಸ್ಕೃತಿ'ಯಲ್ಲಿ ಅಗ್ನಿ, ವಾಯು, ಆಕಾಶ, ಜಲ, ಭೂಮಿ, ಬೆಟ್ಟ, ನದಿ, ಸಮುದ್ರ, ತೊರೆ, ಕಲ್ಲು, ಮಣ್ಣು, ಸೂರ್ಯ, ಚಂದ್ರ, ಮಳೆ, ಮರ, ಗಿಡ, ಬಳ್ಳಿ ಮೊದಲಾದವುಗಳ ಉಲ್ಲೇಖಗಳಿದ್ದರೆ ಪ್ರಾಣಿ ಸಮುದಾಯದಲ್ಲಿ- ಆನೆ, ಸೀಳ್ನಾಯಿ, ಕೋಡಗ, ಸರ್ಪ, ಕಪ್ಪೆ, ಸಿಂಹ, ಹಾವು, ಮರೀಚಿಕೆ, ಮೃಗ, ಕಾಮದೇನು, ಕರು, ಹಂದಿ, ಮದಕರಿ, ಪುರುಷಮೃಗ ಮೊದಲಾದವುಗಳು ಹಾಗೂ ಪಕ್ಷಿ ಸಂಕುಲದಲ್ಲಿ–ನವಿಲು, ಗಿಳಿ, ಕೋಗಿಲೆ, ತುಂಬಿ ಅಳಿಸಂಕುಲ, ಗೂಗೆ, ಕಾಗೆ, ನೊಣ, ತರಣಿಯಹುಳು ಮೊದಲಾದವುಗಳು ಮತ್ತು ಸಸ್ಯಗಳಲ್ಲಿ–ಈಳೆ, ನಿಂಬೆ, ಮಾವು, ಮಾದಲ, ಕಬ್ಬು, ಬಾಳೆ, ಹಲಸು, ನಾರಿವಾಳ, ಕಳವೆ, ರಾಜಾನ್ನ, ಶಾಲ್ಯಕ್ಕಿ, ಮರುಗ, ಮಲ್ಲಿಗೆ ಪಚ್ಚೆ, ಮಡಿವಾಳ, ಬಿಲ್ವ, ಬೆಳವಲ, ಚಂದನ, ಹೊಳ್ಳ, ಹೂ, ಬಳ್ಳಿ, ಮಾಮರ, ಎರದ (ಬಾರಿಗಿಡ) ಬೊಬ್ಬುಲಿ (ಜಾಲಿಮರ) ಗುಲ್ಮಲತಾ, ತಳಿರುಪುಷ್ಪ ಮುಂತಾದ ಅನೇಕ ಗಿಡ–ಮರ ಲತೆಗಳು ಉಲ್ಲೇಖಿತವಾಗಿವೆ.

ಮಹಾದೇವಿಯಕ್ಕನ ಬದುಕು ಪವಾಡ ಸದೃಶವಾದುದು, ಅಸಾಮಾನ್ಯವಾದುದನ್ನು ಬಯಸಿ ವೀರವಿರಾಗಿಣಿಯಾಗಿ ಹೊರಟ ಅಕ್ಕ ಮಹಾದೇವಿಯ ಜೀವನಪಥ ಕನ್ನಡ ಸಾಹಿತ್ಯದಲ್ಲಿಯೇ ವಿನೂತನ ವಾದುದು. "ಲೌಕಿಕ ಭೋಗ ರಾಗಗಳನ್ನು ತೃಣವೆಂದು ತಿರಸ್ಕರಿಸಿ ಪಾರಮಾರ್ಥಿಕ ಬಡಕನ್ನು ನೆಚ್ಚಿಕೊಂಡು ಹೊರಟ ಮಹಾದೇವಿಯಕ್ಕ ಅವಿರಳ ಅನುಭಾವಿ."[೨] ಅವಳು ಬದುಕಿನ ಹೆಚ್ಚು ಭಾಗವನ್ನು ಪ್ರಕೃತಿಯಲ್ಲಿಯೇ ಕಳದಳು. ಅದರಲ್ಲೂ ಅವಳು ಉಡುತಡಿಯಿಂದ ಕಲ್ಯಾಣಕ್ಕೆ ಹೊರಟಾಗ, ಕಲ್ಯಾಣದಿಂದ ಕದಳಿಯ ವನಕ್ಕೆ ಪ್ರಯಾಣ ಬೆಳೆಸಿದಾಗ, ಅವಳು ಪಡೆದ ಅನುಭವ ಅಗಮ್ಯವಾದುದು, ಆ ಸಂದರ್ಭದಲ್ಲಿ ಮಾಡಿದ ಅನೇಕ ಅನುಭವಗಳು ಗೀತೆಗಳಂತಹ ವಚನಗಳ ಸೃಷ್ಟಿಗೆ ಕಾರಣವಾಯಿತು. ಅವಳೊಬ್ಬ ಅನಭಾವಿ ಕವಿಯಾಗಿದ್ದರೂ ಸಹ ಅವಳ ಪಾರಮಾರ್ಥಿಕ ಬದುಕಿನಲ್ಲಿ ಲೌಕಿಕದ ಚಿತ್ರಣ, ವಿಶೇಷವಾಗಿ ಪ್ರಾಕೃತಿಕ ಸಂಧರ್ಭಗಳು ತುಂಬಾ ಅನನ್ಯವಾಗಿಕಾಣುತ್ತವೆ. ತನ್ನ ಇಷ್ಟದೈವವಾದ ತನ್ನ ಮಲ್ಲಿಕಾರ್ಜುನನನ್ನು ನೆನೆಯುತ್ತ ಅವಳು ಉಡುತಡಿಯಿಂದ ಹೊರಟು ನಿಂತಾಗ ಮಹಾದೇವಿಗೆ ಸಮಗ್ರ ಸೃಷ್ಟಿಯೇ ಸ್ವಾಗತ ಬಯಸುತ್ತದೆ. ಆ ಸಂದರ್ಭದ ವರ್ಣನೆ ಅನೇಕ ವಚನಗಳಲ್ಲಿ ಕಾಣಸಿಗುತ್ತದೆ.

*೨) ಶಾಂತಾ ಇಮ್ರಾಪೂರ- ಉಡತಡಿ ಮಹಾದೇವಿಯಕ್ಕ ೨೦೦೫-ಪು-೩*

ವಚನಗಳು ಆಯಾ ಹೊತ್ತಿನ ಭಾವಕ್ಕೆ ನೀಡಿದ ಅಭಿವ್ಯಕ್ತಿ,[೩] ಈ ಭಾವ ವಚನದಲ್ಲಿ ಬೆಳೆಯುತ್ತ ಹೋಗುತ್ತದೆ. ಇಲ್ಲವೇ ಒಮ್ಮೊಮ್ಮೆ ಸೀಮಿತ ಭಾವವನ್ನಷ್ಟೇ ಅದು ಅಭಿವ್ಯಕ್ತಿಪಡಿಸುತ್ತದೆ, "ಸಚರಾಚರಾತ್ಮಕ ಪ್ರಪಂಚವೆಲ್ಲ ಶಿವನ ಚಿದ್ಗರ್ಭದಿಂದು ದಯಿಸಿಪ್ಪದೆಂದುಮ ಶಿವಾಭಿನ್ನತ್ವದಿಂ ಸಕಲ ಪ್ರಾಣಿಗಳಲ್ಲಿ ತನ್ನಾತ್ಮಕಚೇತನವ ತುಂಬಿ ಹಾಗೂ ತನ್ನಲ್ಲಿ ಸಕಲ ಪ್ರಾಣಿಗಳ ಆತ್ಮ ಚೇತನವ ಕಂಡು ದಯಾ ಪರತ್ವವನ್ನುಳ್ಳ ಸರ್ವಜ್ಞಾ ಶಕ್ತಿಯನು ಭಕ್ತಿರಸದಲಿ ಪಡೆವುದು ನೋಡಾ ತಗೆ ಬಂದ ಅಪವಾದ ನಿಂದೆ ಎಡರಾಪತ್ತುಗಳಲ್ಲಿ ಎದೆಗುಂದದೆ ಬಪ್ಪ ಸುಖ ದು:ಖ ಖೇಧ ಹರ್ಷಾದಿಗಳು, ಶಿವನಾಜ್ಞೆಯಹುದೆಂದು ಪರಿಣತ ನಪ್ಪ ತೃಪ್ತಿಯ ಶಕ್ತಿಯನು ಮಾಹೇಶ್ವರ ಸ್ಥಲದಲ್ಲಿ ಪಡೆವುದು ನೋಡಾ, ದೇಹಾದಿ ಆದಿ ಪ್ರಪಂಚಕ್ಕೆ ಮೂಲಿಗನಾದ ಅನಾದಿ ಪರಶೀವನ ಪ್ರಸನ್ನತ್ವವನ್ನುಂಟು ಮಾಡುವ ಅನಾದಿ ಬೋಧಶಕ್ತಿಯನು ಪ್ರಸಾದಿ ಸ್ಥಲದಲ್ಲಿ ಪಡೆವುದು ನೋಡಾ, ಅಂತಪ್ಪ ದೇಹಾದಿ ಪ್ರಪಂಚದ ಚಲನವಲನವು ತನ್ನಾಶ್ರಯದಲ್ಲಿ ನಡೆದು ತಾನು ಆವುದನ್ನೂ ಆಶ್ರಯಿಸದೇ ಸರ್ವಸ್ವತಂತ್ರ ತಾನೆಂಬರಿವನ್ನುಂಟು ಮಾಡುವ ಸ್ವತಂತ್ರ ಶಕ್ತಿಯನ್ನು ಪ್ರಾಣಲಿಂಗಿ ಸ್ಥಲದಲ್ಲಿ ಪಡೆವುದು ನೋಡಾ, ತನ್ನಾಶ್ರಯ ಪಡೆದ ದೃಶ್ಯಮಾನ ದೇಹಾದಿ ಜಗವೆಲ್ಲ ಅನಿತ್ಯವೆಂಬ, ಆದೃಶ್ಯಮಾನ ದೇಹಾದಿಗಳ ಮೂಲೋತ್ಪತ್ತಿಗಳಿಗೆ ಕಾರಣನಪ್ಪ ಪತಿ ಪರಶಿವಲಿಂಗವೇ ನಿತ್ಯವೆಂಬರಿವನ್ನುಂಟು ಮಾಡುವ ಅಲುಪ್ತ ಶಕ್ತಿಯನು ಶರಣ ಸ್ಥಲದಲ್ಲಿ ಪಡೆವುದು ನೋಡಾ"[೪] ಎನ್ನುವಲ್ಲಿ ಅಕ್ಕ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲ ಶಿವನಿಂದ ಉದಯಿಸಿದ್ದು, ಆ ಜಗತ್ತಿನಲ್ಲಿ ಸಕಲ ಪ್ರಾಣಿಗಳ ಆತ್ಮ ಚೇತನವಿರುವುದನ್ನು ಕಾಣಬಹುದು. ಆ ಚೇತನಗಳಿಗೆ ಕಾರಣವಾಗಿರುವ ದಯಾಪರತ್ವವನ್ನು ನಾವು ಪ್ರೇಮದಲ್ಲಿ ಪಡೆಯಬೇಕೆಂಬ ಜೀವನಾನುಭವವನ್ನು ನಿರೂಪಿಸುತ್ತಾಳೆ, ಆಸೃಷ್ಟಿಯನ್ನು ಗುರುವಾಗಿರಿಸಿಕೊಂಡು ಆ ಮೂಲಕ ಬರುವ ಅನುಭವನ್ನು ಶಿವನಾಜ್ಞೆಯೆಂದು ಭಾವಿಸಿ. ಅಲ್ಲಿ ಕಾಣುವ ಕಷ್ಟ, ಸುಖ ಎಡರಾಪತ್ತುಗಳನ್ನು ಎದೆಗುಂದದೆ ನಿಷ್ಠೆಯಿಂದ ಸ್ವೀಕರಿಸಲು ತಿಳಿಸುತ್ತಾಳೆ. ದೇಹದಿಂದ ಮೊದಲಾದ ಎಲ್ಲ ಪ್ರಪಂಚಕ್ಕೆ ಮೂಲಿಗನಾದ ಆ ಪರಮಾತ್ಮನ ಸಂತೃಪ್ತಿಯನ್ನು ಕಾಣವ, ಇಲ್ಲಿಯ ಚಲನವಲನಗಳನ್ನು ಎಚ್ಚರಿಕೆ, ಸಾಮರಸ್ಯ ಭಾವದಿಂದ ಅನುಸಂದಾನಕ್ಕೊಳಪಡಿಸಬೇಕೆನ್ನುವ ಧೋರಣೆಯು, ಅಕ್ಕ ಕಾಣುವ ಪ್ರಪಂಚದ ಚಿಂತನೆ ಎನ್ನಬಹುದು. ಈ ಪ್ರಪಂಚದಲ್ಲಿ ತುಂಬಾ ಮಹತ್ವವುಳ್ಳದ್ದು ಪ್ರಕೃತಿ. ಆ ಪ್ರಕೃತಿಯನ್ನ ಕುರಿತ ಅಕ್ಕ ಮಹಾದೇವಿಯ ಚಿಂತನೆ ದರ್ಶನಾತ್ಮಕವಾಗುತ್ತದೆ.

*೩) ಕನ್ನಡ ಸಾಹಿತ್ಯ ಚರಿತ್ರೆ ಸಂ. ೩, ೧೯೭೭ ಮೈ.ವಿ.ವಿ. ೨೦೦೫ ಪು-೩.*

*೪) ಅಕ್ಕಮಹಾದೇವಿ ವಚನ: (ಶಿವಶರಣೆಯರ ವ.ಸ.ಲ. ಪು.೫೩೫೪*

# ಪ್ರಕೃತಿ ದರ್ಶನ

ಬಯಲಿಂದ ಹುಟ್ಟಿದ ಪರವೆಂಬ ತಾಯಿಗೆ
ಐವರು ಮಕ್ಕಳು ಜನಿಸಿದರು
ಒಬ್ಬ ಭಾವರೂಪ, ಒಬ್ಬ ಪ್ರಾಣರೂಪ
ಒಬ್ಬ ವಿಮುಖನಾಗಿ ಕಾಯ ರೂಪಾದ
ಇಬ್ಬರು ಉತ್ಪತ್ತಿ, ಸ್ಥಿತಿಗೆ ಕಾರಣರಾದರು
ಐಮುಖನರಮನೆ ಸುಖವಿಲ್ಲೆಂದು
ಕೈಲಾಸವ ಹೊಗೆನು ಮರ್ತ್ಯಕ್ಕೆ ಅಡಿಇಡೆನು

*ಅಕ್ಕನ ಮ ೨೪೦ ಪು-೨೩೮*

ಎನ್ನುವ ವಚನದಲ್ಲಿ ಪರಾತ್ಪರ ವಸ್ತು ಬಯಲೆಂದು ಸೂಚಿಸಲ್ಪಟ್ಟಿದೆ. ಶೂನ್ಯ ತತ್ವವಿಕಾಸದ ಅನೇಕ ಹಂತಗಳಾದ ಸರ್ವಶೂನ್ಯ ನಿರಾಲಂಬಶೂನ್ಯ, ನಿಷ್ಕಲ, ಮಹಾಲಿಂಗ, ಸ್ಥಲಗಳನ್ನು 'ಬಯಲೆಂಬ' ಈ ಪದದಲ್ಲಿ ಅಡಗಿಸಲಾಗಿದೆ. ಇದರಿಂದಲೇ ಸೃಷ್ಟಿ ರಚನೆಯಾದುದನ್ನು, ಮುಂದೆ ಅದು 'ಬಯಲಾ'ಗುವದನ್ನು ತಿಳಿಸುವದರೊಂದಿಗೆ ಪ್ರಕೃತಿಯ ಹುಟ್ಟನ್ನು ಕಲ್ಪಿಸಲಾಗಿದೆ. ಬಯಲಿನ ರೂಪಾಂತರವೇ ಈ ಸೃಷ್ಟಿ, ಆ ಸೃಷ್ಟಿಕರ್ತನೆ ತನಗೆ ಗಂಡ ನಾಗಬೇಕೆಂದು ಆನಂತ ಕಾಲ ತಪಸ್ಸಿದ್ದೆ 'ನೋಡಾ ಎನ್ನುವ ಅಕ್ಕ ಆತನನ್ನು ಸಾವಿಲ್ಲದ ಕೇಡಿಲ್ಲದ, ರೂಹಿಲ್ಲದ ಚಲುವನೆನ್ನುತ್ತಾಳೆ, ಎಡೆಯಿಲ್ಲದ ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ ಚಲುವಂಗೆ ನಾನೊಲಿದೆ' ಎಂದು ಸ್ಪಷ್ಟಡಿಸುತ್ತಾಳೆ. ಆ ಪರಶಿವನಲ್ಲಿ ಕಾಣುವ ಚಲುವು ಅದು ಪ್ರಾಕೃತಿಕವಾದ ಚಲವು ಎಂಬುದನ್ನು ಅರಿಯಬಹುದಾಗಿದೆ. ಹೀಗಾಗಿ ಅವನನ್ನು ಕಾಣಲು ಹೋಗುವ ಸಂದರ್ಭದಲ್ಲಿ ಅವಳು ಆ ಪ್ರಕೃತಿಯ ಸೋಬಗನ್ನು ತನ್ನ ಅನೇಕ ವಚನಗಳಲ್ಲಿ ಸೆರೆ ಹಿಡಿಯುತ್ತಾಳೆ.

ನೆಲದ ಮರೆಯ ನಿಧಾನದಂತೆ
ಫಲದ ಮರೆಯ ರುಚಿಯಂತೆ
ಶಿಲೆಯ ಮರೆಯ ಹೇಮದಂತೆ
ಫಲದ ಮರೆಯ ತೈಲದಂತೆ
ಮರದ ಮರೆಯ ತೇಜದಂತೆ
ಭಾವದ ಮರೆಯ ಬ್ರಹ್ಮವಾಗಿಪ್ಪ
ಚನ್ನಮಲ್ಲಿಕಾರ್ಜುನನ ನಿಲವನರಿಯಬಾರದು

*ಅಕ್ಕನ ವ. ೨೧೯*

ಪರಮಾತ್ಮನು ಅವ್ಯಕ್ತನಾಗಿ ಹೇಗಿರುವನೆಂಬುದನ್ನು ಇಲ್ಲಿ ತಿಳಿಸುವ ಅಕ್ಕ, ಆ ಮೂಲಕ ಆತನು ಪ್ರಕೃತಿಯ ಅವಿಭಾಜ್ಯ ಭಾಗವಾಗಿ ಅಲ್ಲಿ ಅಂತರ್ಗತವಾಗಿರುವದನ್ನು

ಹಾಗೂ ಅವನ ಸೃಷ್ಟಿಯ ಅನನ್ಯತೆಯನ್ನು ನಿಬ್ಬೆರಗಿನ ಸ್ಥಿತಿಯಲ್ಲಿ ತುಂಬಾ ಸೋಗಸಾಗಿ ನಿರೂಪಿಸಿದ್ದಾಳೆ. ಆ ಪರಮಾತ್ಮನು ಸಕಲ ಜೀವರಾಶಿಗಳಲ್ಲಿ ಅವ್ಯಕ್ತವಾಗಿ ಇರುವನೆಂದು ನಿಗೂಢವಾಗಿ ಹೇಳಿದರೆ ಅಷ್ಟೇ ಸಾಲದು, ಅವನನ್ನು ಕಾಣುವದಾದರೂ ಹೇಗೆ? ಎಂಬುದರ ಚಿಂತನೆಯೂ ಅಲ್ಲಿ ಕಾಣುತ್ತದೆ. "ನೀರಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದರಿಯೆ?[೫] ಎನ್ನುವ ಅಕ್ಕ-

ನೋಡಿಹೆನೆಂದರೆ ದೃಷ್ಟಿ ಮರೆಯಾಯಿತ್ತು
ಕೂಡಿಹೆನೆಂದರೆ ಭಾವ ಮರೆಯಾಯಿತ್ತು
ಏನೆಬೆನೆಂತೆಂಬೆನಯ್ಯಾ?
ಅರಿದಿಹೆನೆಂಬೆಡೆ ಮರಹು ಮರೆಯಾಯಿತ್ತು
ನಿನ್ನ ಮಮಾಯನತಿಗಳೆವಡೆ ಎನ್ನವಳೆ?
ಕಾಯಯ್ಯಾಚೆನ್ನಮಲ್ಲಿಕಾರ್ಜುನಾ *ಅಕ್ಕ.ವ.-೨೨೧*

ಎಂದು ಹೇಳುವಲ್ಲಿ ದೃಷ್ಟಿ, ಭಾವ, ಮರಹುವಿಗೆ ಅತೀತವಾದ ಆತನನ್ನು ವಿವಿಧ ಹಂತಗಳಲ್ಲಿ (ಸಾಧನೆ) ಗುರುತಿಸಬಹುದೆಂಬ ಸೂಚನೆಯನ್ನು ನೀಡುತ್ತಾಳೆ. ಅಂತರಂಗದಲ್ಲಿ ಪಕವಾದವರಿಗೆ ಈ ಸ್ವರೂಪವನ್ನು ಕಾಣಲು ಸಾಧ್ಯವೆಂಬುದನ್ನು ಅವಳಿಲ್ಲಿ ತೋರಿಸುತ್ತಾಳೆ. ಈ ಪರಮಾತ್ಮನನ್ನು ಶೂನ್ಯ, ಪರಶಿವ ಬಯಲು, ಲಿಂಗ ಎಂಬ ಪರ್ಯಾಯ ಪದಗಳಿಂದ ಗುರುತಿಸುವ ಅಕ್ಕ ಅವನನ್ನು ಒಂದೆಡೆಯಲ್ಲಿ 'ಕೆಂಜೆಡೆಯ ಸುಲಿಪಲ್ಲ ಗೊರವನು' ಎನ್ನುತ್ತಾಳೆ ಲಿಂಗವೆಂಬುದೊಂದು ಅನಂತದ ಹೆಸರು [೬] ಎಂದು ಪ್ರಭುದೇವ ಹೇಳುತ್ತಾರೆ. ಈ ಲಿಂಗವು ತನ್ನ ಕರಸ್ಥಳಕ್ಕೆ ಬಂದ ಪರಿಯನ್ನು ಅಕ್ಕ ಮಹಾದೇವಿ ತಾನು ಕಂಡ ಸೃಷ್ಟಿಯ ಹಿನ್ನೆಲೆಯಲ್ಲಿ ಹೀಗೆ ನಿರೂಪಿಸುತ್ತಾಳೆ.

ಪತಾಳವಿತ್ತಿತ್ತ ಪಾದಂಗಳತ್ತತ್ತ
ದಶದಿಕ್ಕು ಇತ್ತಿತ್ತ ದಶಭುಜಂಗಳತ್ತತ್ತ
ಬ್ರಹ್ಮಾಂಡ ವಿತ್ತತ್ತ, ಮಣಿಮುಕುಟ ವತ್ತತ್ತ
ಚನ್ನ ಮಲ್ಲಿಕಾರ್ಜುನಯ್ಯಾ
ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಲ್ಲಾ ಲಿಂಗವೆ

*ಅಕ್ಕ.ವ.ಸಂ.೨೨೮*

ಲಿಂಗವ್ಯಾಪ್ತಿಯ ಮಹತ್ವವನ್ನು ವಿವರಿಸಲು ಅಕ್ಕ ಬಳಸಿಕೊಂಡಿರುವ ಸೃಷ್ಟಿಯ ಪರಿಕಲ್ಪನೆಯ ಪಾತಾಳ ದಶದಿಕ್ಕು ಬ್ರಹ್ಮಾಂಡ ಹಾಗೂ ಕರಸ್ಥಲಗಳನ್ನು ಇಲ್ಲಿ ಪರಿಭಾವಿಸಬೇಕು. ಅದರಲ್ಲಿ ವ್ಯಾಪ್ತಿಯು ಇವೆಲ್ಲಕ್ಕಿಂತ ಹಿರಿದು ಎಂದು ಹೇಳುತ್ತ, ಇವುಗಳಲ್ಲಿರುವ ಅದು ಈ ಪ್ರಕೃತಿಯನ್ನು ಮೀರಿ ಬೆಳೆದಿರುವುದನ್ನು ಅರುಹುತ್ತಾಳೆ ಆದರೆ

*೫) ಅಕ್ಕನ ವಚನ – ೨೧೮ ಪು-೬೮ (ಶಿವಶರಣೆಯರ ವಚನ ಸಂಪುತ*

*೬) ಸಮಗ್ರ ವಚನಸಂಪದ ಅಲ್ಲಮ ಪ್ರಭುದೇವರ ವಚನಗಳು-ಪು.೧೪೨ ವ-೫೨೫*

ಬೃಹತ್ತಾದ ಘನವಸ್ತು ಸಂಕುಚಿತಾಕಾರವನ್ನು ತಾಳಿ ಇಷ್ಟಲಿಂಗವಾಗಿ ಪೂಜೆಗೊಳ್ಳುವ ವಿಷಯವನ್ನು ಪ್ರಾಕೃತಿಕ ಹೋಲಿಕೆಯೊಂದಿಗೆ ಅಕ್ಕ ಬಹಳ ಮಾರ್ಮಿಕವಾಗಿ ತಿಳಿಸುತ್ತಾಳೆನ್ನಬಹುದು. ಈ ವಿಶ್ವದ ಪರಿಕಲ್ಪನೆಯು ಶರಣರಲ್ಲಿ ಅಡಕವಾಗಿರುವ ವೈಜ್ಞಾನಿಕ ಮನೋಭಾವವನ್ನು ತೋರಿಸುತ್ತದೆ. ಬಸವಣ್ಣನವರ ಜಗದಗಲವೆಂಬ ವಚನವು [೭] ಹೀಗೆ ಇರುವದನ್ನು ಇಲ್ಲಿ ಗಮನಿಸಬಹುದು.

ಈ ಸ್ವರೂಪವಿರುವ ಪರಮಾತ್ಮನು ಈ ಲೋಕದ ಎಲ್ಲ ಜೀವ ಜಂತುಗಳಲ್ಲಿ ಅಂತರ್ಯಾಮಿಯಾಗಿಯೂ ಆತ ಬೇರೆ ಯಾಗಿರುವ ರೀತಿಯನ್ನು ಅಕ್ಕಮಹಾದೇವಿ ತನ್ನ ವಚನವೊಂದರಲ್ಲಿ ಹೀಗ ವಿವರಿಸುತ್ತಾಳೆ.

ಈಳೆ ನಿಂಬೆ ಮಾವು ಮೊದಲಕ್ಕೆ
ಹುಳಿ ನೀರ ನೆರೆವವ ರಾರಯ್ಯ?
ಕಬ್ಬು, ಬಾಳೆ ಹಲು ನಾರಿವಾಳಕ್ಕೆ
ಸಿಹಿ ನೀರೆ ನೆರೆದಿವ ರಾರಯ್ಯ?
ಕಳವೆ ರಾಜಾನ್ನ ಶಾಲ್ಯಾನ್ನಕ್ಕೆ
ಜಗರದ ಉದಕವ ನೆರೆದವರಾರಯ್ಯ?
ಮರುಗ ಮಲ್ಲಿಗೆ ಪಚ್ಚೆ ಮಡಿವಾಳಕ್ಕೆ
ಪರಿಮಳ ದುದಕವ ನೆರೆದವರಾರಯ್ಯ?
ಇಂತೀ ಜಲವು ಒಂದೇ ನೆಲವು ಒಂದೆ ಅರಶವು ಒಂದೆ
ಜಲವು ಹಲವು ದ್ರವ್ಯ ಕೂಡಿ
ತನ್ನ ಪರಿಬೇಕಾನಿಹ ಹಾಗೆ
ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯನು
ಹಲವು ಜಗಂಗಳ ಕೂಡಿಕೊಂಡಿರ್ದದೇನು?
ತನ್ನ ಪರಿಬೇರೆ

*ಅಕ್ಕನ ವ.೬೬ ಪು.೨*

ಚೆನ್ನಮಲ್ಲಿಕಾರ್ಜುನನ್ನು ಪತಿಯಾಗಿ ಸ್ವೀಕರಿಸಿ ತನ್ನ ಸತೀತ್ವದ ನಿಷ್ಠೇಯನ್ನು ಅವನಲ್ಲಿ ತಾದಾತ್ಮ ಭಾವದಿಂದ ಅರ್ಪಿಸುವ ವಿಶಿಷ್ಟಗುಣ ಈ ವಚನದಲ್ಲಿ ಕಂಡು ಬರುತ್ತದೆ.

ಅಕ್ಕನ ವಚನಗಳಲ್ಲಿ ಈ ಭಾವದ ಅನುಸಂದಾನವೇ ಅಧಿಕವಾಗಿರುವದನ್ನು ಕಾಣಬಹುದಾದರೂ, ಅದನ್ನು ಸಸ್ಯ ಸಂಸ್ಕೃತಿಯಲ್ಲಿ ಪರಿಚಯಿಸಿಕೊಡುವ ರೀತಿ ವೈಚಾರಿಕವಾದುದು. ಈ ವಚನದ ಜೊತೆಗೆ ತನ್ನ ವಿನೋದಕ್ಕೆ ತಾನೆ ಸೃಜಿಸಿದ ಸಕಲ ಜಗತ್ತು. ತನ್ನ ವಿನೋದಕ್ಕೆ ತಾನೇ ಸುತ್ತಿದನಕ್ಕೆ ಸಕಲ ಪ್ರಪಂಚನು ತನ್ನ ವಿನೋದಕ್ಕೆ ತಾನೆ ತಿರುಗಿಸಿದನನಂತ ಭವದು:ಖಗಳಲ್ಲಿ[೮] ಎನ್ನುವ ವಚನವನ್ನು ಪರಿಭಾವಿಸಿದರೆ ಸೃಷ್ಟಿ

*೭) ಬಸವಣ್ಣನವರ ವಚನಗಳು – ಪು ೧೮ ವ–೨೪೪*

ಕರ್ತನಾದ ಪರಮಾತ್ಮನ ಇರವು ಲೀಲೆಗಳು ತನಗೆ ತಾನೇ ಸೃಷ್ಟಿಗೊಳ್ಳುತ್ತವೆ. ಹಾಗೂ ಪರಮಾತ್ಮನು ಅವ್ಯಕ್ತವಾಗಿ ಎಲ್ಲ ಜೀವಿಗಳಲ್ಲಿಯೂ ಅಡಗಿರುವುದನ್ನು ಚಿನ್ನದೊಳಗಣ ಬಣ್ಣದಂತೆ ಎಂದು ಹೇಳುವ ಮೂಲಕ ತಿಳಿಸುತ್ತಾಳೆ. ತನ್ನ ವಿನೋದಕ್ಕಾಗಿ ತಾನೇ ಈ ಜಗತ್ತನ್ನು ಸೃಷ್ಠಿ ಮಾಡಿ ಅದಕ್ಕೆ ಚಲನ ಶೀಲತೆಯನ್ನು ಕೊಟ್ಟು ಅನಂತ ಭವ ದು:ಖದಲ್ಲಿ ಲೋಕದ ವಸ್ತುಗಳು ತಿರುಗುವಂತೆ ಮಾಡುವದನ್ನು ತಿಳಿಸಿ ಅದರ ಮಾಯಾ ಪಾಶವು ಹಿರಿವುದು ಅವನಿಂದಲೇ ಎಂದು ಹೇಳಿ ಎಲ್ಲರಲ್ಲಿ ಆ ಮೂಲಕ ಭಕ್ತಿ ತಾದಾತ್ಮವನ್ನುಂಟು ಮಾಡುತ್ತಾಳೆ ಈಳೇ, ನಿಂಬೆ, ಮಾವು ಮೊದಲಕ್ಕೆ-ಎಂಬ ವಚನದಲ್ಲಿ ಸೃಷ್ಟಿಕ್ರಿಯೆಯಲ್ಲಿನ ವೈಚಿತ್ರ್ಯವನ್ನು ಆಶ್ಚರ್ಯ ಹಾಗೂ ಮುಗ್ದಸ್ಥಿತಿಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಅಕ್ಕ ಬಣ್ಣಿಸಿರುವುದನ್ನು ಅರಿಯಬಹುದು ನೆಲ, ಜಲ, ಆಕಾಶ, ಹವೆ ಒಂದೇ ಆದರೂ ಪರಮಾತ್ಮನ ಸೃಷ್ಠಿಕ್ರಿಯೆಯಲ್ಲಿ ಈಳೆ, ಲಿಂಬೆ ಮಾವು, ಮೊದಲಕ್ಕೆ ಹುಳಿಯ, ರುಚಿ, ಕಬ್ಬು, ಬಾಳೆ, ಹಲಸು, ತೆಂಗು ಇವುಗಳಿಗೆ ಸಿಹಿಯ ರುಚಿ, ಕಳವೆ ರಾಜನ್ನ, ಶಾಲ್ಯನ್ನಕ್ಕೆ ಸ್ವಾದದ ರುಚಿಮ ಮರುಗ, ಮಲ್ಲಿಗೆ, ಪಚ್ಚೆ, ಮಡಿವಾಳಕ್ಕೆ ಸುವಾಸನೆ ಇರುವುದು ಎಂತಹ ಚಿತ್ರ ಸಂಯೋಜನೆಯಲ್ಲವೇ? ಪಂಚಭೂತಗಳ ಸಂಯುಕ್ತ ಪ್ರಕ್ರಿಯೆ ಸೃಷ್ಠಿಯ ಅವಿಭಾಜ್ಯ ಘಟಕವಾಗಿದ್ದರೂ. ಆಲವುಹಲವು ದ್ರವ್ಯಗಳೊಡನೆ ಸೇರಿ ರುಚಿ ಭೇದಗಳಿಗೆ ಕಾರಣೆಭೂತವಾಗುತ್ತದೆ. ಆದರೂ ಅದು ತನ್ನ ಅಸ್ತಿತ್ವವನ್ನು ತನಿಯಾಗಿಯೇ ಉಳಿಸಿಕೊಂಡಿರುತ್ತದೆ. ಹಾಗೆಯೇ ಪರಮಾತ್ಮನ ಸೃಷ್ಟಿಕ್ರಿಯೆ ಎಂಬ ಅನುಭವವನ್ನು ಘನೀಭೂತವಾಗಿ ಧ್ವನಿಸುವುದು ಈ ವಚನದಲ್ಲಿ ವಿಶಿಷ್ಟತೆ ಎಂಬುದನ್ನು ಇಲ್ಲಿ ಅರಿಯಬಹುದು, ಸೃಷ್ಟಿಯಲ್ಲಿಯ ಸಸ್ಯ ಸಂಕುಲದ ಒಂದು ಭಾಗವನ್ನು ಉಲ್ಲೇಖಿಸಿಕೊಂಡು ಜಗನ್ನಿಯಾಮಕನ ಕ್ರಿಯೆಯನ್ನು ಕಟ್ಟಿಕೊಡುವ ಇದು, ಆ ಕ್ರಿಯೆಗೆ ಅನುಭಾವಿಯೋರ್ವರು ಆಶ್ಚರ್ಯಪ್ರಾಯವಾದನ್ನು ಕಾಣಬಹುದಾಗಿದೆ.

ಜಗನ್ನಿಯಾಮಕನಾದ ಪರಮಾತ್ಮನೇ 'ಜಗದ ಯಂತ್ರವಾಹಕನು' ಅವನುಅಡಿಸಿದಂತೆ ಆಡಬೇಕು. ನುಡಿಸಿದಂತೆ ನುಡಿಯಬೇಕು, ಅವನು ಇರಿಸಿದಂತೆ ಇರಬೇಕು ಎನ್ನುವ ಸಂಪೂರ್ಣ ಶರಣಭಾವ ವ್ಯಕ್ತವಾಗಿದ್ದರೂ, ಆ ಸ್ಥಿತಿಯ ಬಳಿಕ ಭಕ್ತಿಯ ಅನುಸಂದಾನದಲ್ಲಿ ವೈಯಕ್ತಿಕತೆ ಎನ್ನುವುದು, ಇಲ್ಲವೇ ಇಲ್ಲವೆಂದಲ್ಲ ಅದನ್ನು ಸೃಷ್ಠಿಯ ಮೂಲಕ ಪಡೆಯಬಹುದು. ಅಕ್ಕಮಹಾದೇವಿಯು ತನ್ನ ಇಂತಹ ವಿಚಾರಗಳನ್ನು ತಿಳಿಸಲು ಮತ್ತೆ ಸೃಷ್ಟಿಯ ವಸ್ತುಗಳನ್ನು ಉಪಮೆಯಾಗಿ ಬಳಸಿಕೊಂಡಿದ್ದಾಳೆ.

*೮)   ಅಕ್ಕನ ಶಿವಶರಣೆಯ ವಚನಗಳು – ಲಿ.ಕ.ಮ.ಸಂ.೧೯೦*

'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ,
ಎನಗುಳ್ಳದೊಂದು ಮನ
ಆ ಮನ ನಿಮ್ಮಲ್ಲಿ ಸಿಲುಕಿದ ಬಳಿಕ
ಎನಗೆ ಭವವುಂಟೆ

*ಅಕ್ಕ.ವ.೨೯೭ ಪು. ೯೨*

ಎಂಬಲ್ಲಿ ಸೋಗಸಾದ ಉಪಮೇಯನ್ನಿಟ್ಟುಕೊಂಡು ಸೂರ್ಯನಿಂದ ಲೋಕ ಕ್ರೀಯಾಶೀಲವಾಗುವಂತೆ ಮನದಿಂದ ಕರಣಂಗಳು ಚೇಷ್ಟೆಗೊಳ್ಳುವುದನ್ನು ಮನ ಮುಟ್ಟುವಂತೆ ತಿಳಿಸುತ್ತಾರೆ. ಮನಸ್ಸಿನ ಚಾಂಚಲ್ಯವನ್ನು ಚಿತ್ರಿಸಲು ಅಕ್ಕಮಹಾದೇವಿಗೆ ಬಸವಣ್ಣನವರಂತೆ ಅಭಿವ್ಯಕ್ತಿ ತಂತ್ರ ಹಿಡಿತಕ್ಕೆ ಸಿಕ್ಕಿಲ್ಲವೆನಿಸಿದರೂ ಸಹ ಅಕ್ಕ ಕೆಲವು ಸಂದರ್ಭಗಳಲ್ಲಿ ಅದನ್ನು ಪರಿಣಾಮಕಾರಿಯಾಗಿ ಹೇಳುತ್ತಾಳೆ 'ಬೊಬ್ಬುಲಿಯನೇರಿದ ಮರ್ಕಟನಂತೆ ಹಣ್ಣಮೆಲ್ಲಲಿಲ್ಲ ಕುಳ್ಳಿರೆ ಠಾವಿಲ್ಲ' ಎಂಬುದನ್ನು ನಾವಿಲ್ಲಿ ಗಮನಿಸಬಹುದು.

'ನಚ್ಚುಗೆ ಮನ ನಿಮ್ಮಲ್ಲಿ, ಮೆಚ್ಚುಗೆ ಮನ ನಿಮ್ಮಲ್ಲಿ–ಕೊರಗುವೆ ಮನ ನಿಮ್ಮಲ್ಲಿ ಎನ್ನ ಪಂಚೇಂದ್ರಿಯಗಳು ಕಬ್ಬುನಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನ [೯] ಎಂದು ತಿಳಿಸುವ ಅಕ್ಕ ಮನದ ಮರ್ಕಟತನವನ್ನು ಗೆಲ್ಲುವುದು ಲಿಂಗ ಸಂಬಂಧದಿಂದಲೇ ಸಾದ್ಯವೆಂದು ತಿಳಿಸುತ್ತಾಳೆ.

ಆ ಪರಮಾತ್ಮನ ನೆಲೆಯನ್ನರಿಯಲು ಹೊರಟು ನಿಲ್ಲುವ ಅಕ್ಕ ಗುಡ್ಡ, ಬೆಟ್ಟ, ನದಿ, ಹಳ್ಳ, ಕೊಳ್ಳಗಳನ್ನು ದಾಟಿ ಬಂದಳು, ಗಿಡ, ಮರ, ಲತೆಗಳನ್ನು ಸ್ಪರ್ಶಿಸಿದಳು, ಅಲ್ಲಿ ಮರ್ಕಟ, ಸಿಂಹ, ಆನೆ, ಕುದುರೆ, ನವಿಲು, ಕೋಗಿಲೆ, ಗಿಳಿ, ಹಂಸ ಚೆರಣಿಯ ಹುಳುಗಳನ್ನು ಕಂಡಳು, ಅವುಗಳ ಗುಣಸ್ವರೂಪ ಕ್ರಿಯೇಗಳನ್ನು ಅರಿತಳು "ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುವ ಕುಲಜರಲ್ಲಿ ಪ್ರಮುಖವಾಗಿರುವ ಅಕ್ಕ ಪ್ರಪಂಚದ ವಸ್ತು ವಿಷಯಗಳೊಂದಿಗೆ, ಪ್ರಾಣಿ, ಪಕ್ಷಿ, ಸಸ್ಯ ಸಂಕುಲಗಳನ್ನು ಪ್ರೀತಿಸಿದಳು. ಅವೆಲ್ಲವುಗಳನ್ನು ಬಹು ಸೂಕ್ಷವಾಗಿ ನಿರೀಕ್ಷಿಸಿದಳು. ಮಾನವ ಸ್ವಭಾವದ ಅನೇಕ ಅವಸ್ಥೆಗಳನ್ನು ಹಿಡಿದು ತೋರಿಸುವಲ್ಲಿ ಆ ಪ್ರಾಣಿ ಜಗತ್ತನ್ನು ಪ್ರತಿಮೆ ರೂಪಕ, ದೃಷ್ಟಾಂತಗಳನ್ನಾಗಿ ಬಳಸಿಕೊಂಡಳು. ಅವಳು ವನ್ಯಲೋಕದಿಂದ ಆರಿಸಿಕೊಂಡ ಈ ಪ್ರಾಣಿ, ಪಕ್ಷಿ, ಸಸ್ಯ ಸಂಸ್ಕೃತಿ ಹೇರಳವಾಗಿರುವದನ್ನು ಅವಳ ಹಲವು ವಚನಗಳಲ್ಲಿ ಅಕ್ಕನ ಜೀವನಾನುಭವದ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಅಧ್ಯಯನ ಮಾಡಬಹುದು.

*೯)   ಅಕ್ಕನ ವ.ಸಂ. ೨೦೨ ಪು. ೯೬*

## ಪ್ರಾಣಿ ಪ್ರಪಂಚ

ಹನ್ನೆರಡನೆಯ ಶತಮಾನದಲ್ಲಿ ಮಾಡಿಬಂದ ಒಂದು ಅಪರೂಪ ಸಾಹಿತ್ಯ ಪ್ರಕಾರ ಈ ವಚನಗಳು ಅಕ್ಕಮಹಾದೇವಿಯು ಈ ಪ್ರಕಾರವನ್ನು ಪ್ರಮುಖವಾಗಿ ಧರ್ಮ ಪ್ರಸಾರದ ಸಾಧನವನ್ನಾಗಿ ಬಳಸಿಕೊಂಡರು. ಕವಿಯಾಗಿ ಕೀರ್ತಿ ಗೌರವಗಳನ್ನು ಗಳಿಸಿಕೊಳ್ಳಬೇಕೆಂಬ ಬಯಕೆ ಅವರಿಗಿರಲಿಲ್ಲ. ಅಂದಂದಿನ ಅವರ ಅನುಭವ ತಮ್ಮ ತೀವ್ರತೆ ಒತ್ತಡಗಳಿಂದಾಗಿ ವಚನ ರೂಪ ತಾಳಿತು. ಅವರದು ಕವಿ ಹೃದಯವಾದ್ದರಿಂದ ಅವರಾಡಿದ ಮಾತು ಅವರಿಗರಿವಿಲ್ಲದೆಯೇ ಕಾವ್ಯವಾಯಿತು. ಅವರ ಓಂದೊಂದು ವಚನವು ಭಾವಗೀತೆಯ ಸತ್ವ ಸೌಂದರ್ಯಗಳನ್ನು ಒಡಗೂಡಿಸಿಕೊಂಡು ಬಿಡಿಬಿಡಿಯಾಗಿ ಮುಕ್ತಕಗಳಂತಿವೆ. [೧೦] ಸಾಮಾನ್ಯ ಮನುಷ್ಯನನ್ನು ತಮ್ಮ ಗುರಿಯನ್ನಾಗಿ ಇಟ್ಟುಕೊಂಡ ಅಕ್ಕಮಹಾದೇವಿ ಸಾಮಾನ್ಯನ ಅನುಭವದ ಪರಿಮಿತಿಯಲ್ಲಿ ಬರಬಹುದಾದ ತಮ್ಮ ಸುತ್ತ ಮುತ್ತ ಕಂಡ ಬದುಕಿನ ಪ್ರಾಣಿ ಪ್ರಪಂಚವನ್ನು ಗ್ರಹಿಸಿ ವಚನಗಳಲ್ಲಿ ಹಿಡಿದಿಟ್ಟಿದ್ದಾರೆ.

'ಎಮ್ಮೆಗೊಂದು ಚಿಂತೆ ಸಮಗಾರಗೊಂದು ಚಿಂತೆ
ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ
ಎನಗೆ ಎನ್ನ ಚಿಂತೆ, ತನಗೆ ತನ್ನ ಕಾಮದ ಚಿಂತೆ
ಒಲ್ಲೆ ಹೋಗು, ಸೆರಗ ಬಿಡು ಮರುಳೆ
ಎನಗೆ ಚನ್ನಮಲ್ಲಿಕಾರ್ಜುನ ದೇವರು
ಒಲಿವರೋ ಒಲಿಯರೋ ಎಂಬ ಚಿಂತೆ — *ಅಕ್ಕನ. ವ ೮೯ ಪು.೬೧*

ಈ ವಚನ ಅಕ್ಕನ ಚಿಂತೆಯನ್ನು ಸವಿವರಗೊಳಿಸುತ್ತದೆ. ಇದರಲ್ಲಿ ಬಳಕೆಯಾಗಿರುವ 'ಎಮ್ಮೆ' ಹಾಗೂ 'ಸಮಗಾರ' ಧರ್ಮಿ ಹಾಗೂ ಕರ್ಮಿಗಳ ಮಧ್ಯದ ವೈರುಧ್ಯವನ್ನು ಸ್ಪಷ್ಟಿಪಡಿಸುತ್ತ, ಅವಳ ಮನೋಭಿಲಾಸೆಯನ್ನು ಅರ್ಥ ಪೂರ್ಣವಾಗಿ ತಿಳಿಸುತ್ತ ಅದರಲ್ಲೂ 'ಎಮ್ಮೆಯ' ದೃಷ್ಟಾಂತವು ಅರ್ಥದ ತೀವ್ರತೆಯನ್ನು ಹೆಚ್ಚಿಸಿರುವದು ಗಮನಾರ್ಹ ಸಂಗತಿ.

ಹೆಣ್ಣಾಗಿ ಹುಟ್ಟಿ ಅನುಭಾವಿಯಾಗಿ ವಿರಕ್ತೆಯಾಗಿ ಬಾಳಿದ ಅಕ್ಕನ ಜೀವನವೊಂದು ಹೋರಾಟ ಸಂದಿಗ್ದತೆಗಳ ಸರಮಾಲೆ, [೧೧] ವಿವಾಹ ಪಾತಿವೃತ್ಯ, ಪತಿದೈವ ಇತ್ಯಾದಿ ಸಮಾಜ ನಿರ್ಮಿತ ಕಟ್ಟಳೆಗಳಿಗೆ ಬದ್ಧಳಾಗುವುದೇ ಸ್ತ್ರೀ ಧರ್ಮವೆನ್ನಲಾದ ಸಂದರ್ಭದಲ್ಲಿ ತನ್ನ ಗುರಿ ಸಾಧನೆಗಾಗಿ ಅವಳ ಸಾಂಪ್ರದಾಯಿಕ ಸ್ತ್ರೀ ಧರ್ಮವನ್ನು ಮೀರಿದ ಅಕ್ಕ ಅನಂತ ಸಂಕಷ್ಟಗಳನ್ನು ಸಹಿಸಿಕೊಂಡಿರುವ ಚಿತ್ರವಿಲ್ಲಿ ಕಾಣದೊರೆಯುತ್ತದೆ.

ಕೌಶಿಕನಿಂದ ಅವಳು ಬಿಡಿಸಿಕೊಳ್ಳುವ ಪ್ರಸಂಗದಲ್ಲಿ, ಕಾಯಮೋಹಕ್ಕೊಳಗಾದ ಅವನಿಂದ ಬಿಡುಗಡೆಕೊಳ್ಳಲು ತನ್ನ ಸ್ತ್ರೀ ಸಹಜವಾದ ಲಜ್ಜೆಮೀರಿ ಅವಳು

*೧೦) ಸ.ಕ.ಸಾ.ಚರಿತ್ರ – ಸಂ. ೩ ೧೯೭೬ ಪು–೧೧೩*

*೧೧) ಉಡು ತಡಿಯ ಮಹಾದೇವಿಯಕ್ಕ – ೨೦೦೫ ಶಾಂತಾ ಇಮ್ರಾಪೂರ ಪು.೪೦*

ಮಾತನಾಡಬೇಕಾಯಿತು. ಆ ಸಂಧರ್ಭದಲ್ಲಿ ಅವಳು ಎಮ್ಮೆ-ಸಮಗಾರರ ಹಾಗೂ ಧರ್ಮಿಕರ್ಮಿಯರ ವಾಸ್ತವ ಚಿಂತೆಗಳ ದೃಷ್ಟಾಂತದಲ್ಲಿ ತನಗೆ ಚೆನ್ನಮಲ್ಲಿಕಾರ್ಜುನನು ಒಲಿವನೋ? ಒಲಿಯನೋ? ಎಂಬ ಚಿಂತೆಯನ್ನು ತಿಳಿಸುತ್ತ ತನ್ನ ಆಧ್ಯಾತ್ಮಿಕ ಆದರ್ಶವನ್ನು ಸ್ಪಷ್ಟಪಡಿಸುವ ಚಿತ್ರ ಇಲ್ಲಿ ಎದ್ದು ಕಾಣುತ್ತದೆ. ಏರುಜವ್ವನದಲ್ಲಿಯೇ "ಕಾಮನ ತಲೆಯ ತೊರೆದು, ಕಾಲನ ಕಣ್ಣ ಕಳೆದು, ಸೋಮ, ಸೂರ್ಯರ ಹುಡಿಮಾಡಿ ತಿಂಬವಳಿಂಗೆ ನಾಮವ ನಿಡಬಲ್ಲವರಾರು ಹೇಳಿರೇ" ಎಂಬ ನಿಲವು ಅಕ್ಕಮಹಾದೇವಿಯದು.

ವಚನಗಳು ಪ್ರಜ್ಞಾಪೂರ್ವಕವಾಗಿ ಕಟ್ಟಿದ ಕಾವ್ಯವಲ್ಲವಾದುದರಿಂದ ಅಕ್ಕನ ವಚನಗಳು ವಸ್ತುವಿಗನುಗುಣವಾಗಿ ಮಾಡಿಬಂದಿಲ್ಲ. ಯಾವ ಯಾವ ಮಾನಸಿಕ ಸ್ಥಿತಿಯಲ್ಲಿ ಅವಳು ತನ್ನ ಅನುಭವಗಳನ್ನು ಹೇಳಿಕೊಂಡಳೋ ಅವೆಲ್ಲವೂ ಕಾಲಾನುಕ್ರಮವಾಗಿಲ್ಲ ಅವುಗಳನ್ನು ಭಾವಾನುಗುಣವಾಗಿಯೂ ವಿಂಗಡಿಸಿಲ್ಲ. ಸಾಧಕ ಭಕ್ತನ ಮನಸ್ಥಿತಿಯ ಅಭಿವ್ಯಕ್ತಿಯನ್ನು ಇಲ್ಲಿಯ ಅನೇಕ ವಚನಗಳಲ್ಲಿ ಕಾಣಬಹುದು. ಭಕ್ತನ ಸಾಧನ ಮಾರ್ಗದ ಹಲವಾರು ಕ್ಷಣಗಳ ಅಭಿವ್ಯಕ್ತಿಯುತ ಪ್ರಾಣಿ ಪ್ರಪಂಚದ ಹೋಲಿಕೆಯಲ್ಲಿವೆ ಅಂಥವುಗಳಲ್ಲಿ ಡೊಂಬರಾಟದ ಕೋಡಗನ ಉಪಮೇಯನ್ನಿಲ್ಲಿ ನೋಡಬಹುದು.

ಕೋಲತುದಿಯ ಕೋಡಗನಂತೆ
ನೇಣ ತುದಿಯ ಬೊಂಬೆಯಂತೆ
ಆಡಿದೆನಯ್ಯಾ ನೀನಾಡಿಸಿದಂತೆ
ಆನು ನುಡಿವೆನೆಯ್ಯಾ ನೀ ನುಡಿಸಿದಂತೆ
ಆನು ಇದ್ದೇನಯ್ಯಾ ನೀನು ಇರಿಸಿದಂತೆ
ಜಗದ ಯಂತ್ರವಾಹಕ ಚನ್ನ ಮಲ್ಲಿಕಾರ್ಜುನ
ಸಾಕೆಂಬನ್ನಕ್ಕ

*ಅಕ್ಕನ ವ. ೧೫೬*

ಆ ದೇವರು ಆಡಿಸಿದಂತೆ, ನುಡಿಸಿದಂತೆ ಇರಿಸಿದಂತೆ ಇರುವೆನೆಂಬುದನ್ನು ಇಲ್ಲಿ ಅಕ್ಕ ಸೋಗಸಾಗಿ ತಿಳಿಯುವಂತೆ ನಿರೂಪಿಸುವುದು ಗಮನಾರ್ಹ ಅಂಶ, ಅಕ್ಕ ತಮ್ಮ ರಚನೆಯನ್ನು ಓದುಗರಿಗೆ ಆತ್ಮೀಯವಾಗುವಂತೆ ಮಾಡುವುದು ಅವರು ಬಳಸಿರುವ ಪ್ರಾಣಿ-ಪಕ್ಷಿ ಪ್ರತೀಕ ಹಾಗೂ ಉಪಮೇ ರೂಪಕಗಳಿಂದ ಎನ್ನಬಹುದು. ಅವಳು ಕೊಡುವ ಉಪಮೆಗಳು ಸಮಂಜಸವಾದವುಗಳಾಗಿವೆ.

ಚಂದ್ರಕಾಂತ ಶಿಲೆಗೆ ಒಂದು ಗಜ ಹೋರುವಂತೆ
ತನ್ನ ನೆರಳಿಂಗೆ ತಾನೆ ಹೋರಿ ಸಾವಂತೆ
ಆನೆಯ ಗತಿ ಆನೆಯ ಮತಿ

ಆನೆಯಹುದು ಆನೆಯಲ್ಲ, ಅದನೇನೆಂಬೆ?
ನಿನೆನ್ನ ಕರಸ್ಥಲದಲ್ಲಿ ಸಿಲ್ಕಿದೆಯಾಗಿ ನೀನಾನೆಂಬ ಬ್ರಾಂತೀಯೇಕೆ?
ನಾನು ನೀನಲ್ಲದೆ ತೆರಹಿಲ್ಲ ಚೆನ್ನಮಲ್ಲಿಕಾರ್ಜುನಾ

*ಅಕ್ಕನ ವ.೧೭೦.ಪು. ಸಂ. ೧೩೨*

ಮಹಾದೇವಿ ಅಕ್ಕನ ಭಾವನಿರ್ಭರತೆ, ತೀವ್ರತೆ ಹಾಗೂ ತನ್ಮಯತೆಯನ್ನು ಅಭಿವ್ಯಕ್ತಿಸುವ ಈ ವಚನವು ಅವಳ ಭಾವ ಸಂಪತ್ತನ್ನು ದ್ವಿಗುಣಗೊಳಿಸಿದೆ. ಇಲ್ಲಿ ವ್ಯಕ್ತವಾಗಿರುವ 'ಆನೆ' ಯ ಉಲ್ಲೇಖವು ಅಕ್ಕನ ಅನುಭಾವದ ಒಂದು ಸಂದರ್ಭವನ್ನು ಹೇಳುತ್ತದೆ. ಜೀವಾತ್ಮನನ್ನು ದೇಹಭಾವದಿಂದ ಬಿಡುಗಡೆಗೊಳಿಸಿ 'ತಾನಾರೆಂಬುದ ತೋರಿಸಿ' ಶಿವಭಾವಕ್ಕೆ ವಿಕಾಸಗೊಳಿಸಿದೆ. ಅಂತರ್ಗತ ಪರಮಾತ್ಮನ ಅರಿವಿಲ್ಲದ ಮಾನವನಲ್ಲಿ ಮಹಾ ದೇವತ್ವವನ್ನು ಎಚ್ಚರಿಸಿ ನಿಲ್ಲಿಸುವದೇ ಅನುಭಾವವಾಗಿದೆ.

ಅಕ್ಕನ ಆಧ್ಯಾತ್ಮೀಕ ಚಿಂತನೆಗಳು ಅನುಭವವಾಗಿ ಭಾಷೆಯ ರೂಪದಲ್ಲಿ ಆಕೆಯ ವಚನಗಳಲ್ಲಿ ಮೈ ತಳೆದಿದೆ. ಭಕ್ತ ಮಹೇಶ ಸ್ಥಲಗಳಲ್ಲಿ ನಿಂತ ಅನುಭಾವಿಯ ಶ್ರದ್ಧೆ, ನಿಷ್ಠೆ ಆಕೆಯಲ್ಲಿದ್ದದ್ದರಿಂದ ಆನೆ ನುಡಿದದ್ದು ಸುಂದರ ಕಾವ್ಯವಾಗಿದೆ. ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡಂತಯ್ಯಾ? ಎಂದು ಪ್ರಶ್ನಿಸುತ್ತ, ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಂತೆ ಮನದಲ್ಲಿ ಕೋಪವ ತಾಳದೆ ಸಮಧಾನಿಯಾಗಿರಬೇಕು. [೧೨] ಎಂದು ಸಮಾಧಾನ ಪಡಿಸುತ್ತ ಧೈರ್ಯ ತುಂಬುತ್ತದೆ. ಅಲ್ಲದೇ ವಚನ ಹಿಂದಿರುವ ಅಕ್ಕನ ಸಂಘರ್ಷ
ಬದುಕನ್ನು ಈ ವಚನ ಕಟ್ಟಕೊಡುತ್ತದೆ. ಇಲ್ಲಿಯ ವಚನದ ಕೇಂದ್ರಭಾವ ವೈಯಕ್ತಿಕ ಹೋರಾಟವಾದರೂ ಅದು ಸಮಾಜವನ್ನು ಕುರಿತೇ ಹೇಳುವ ಮಾತೆಂಬುದನ್ನು ಅರಿಯಬೇಕು. ಸಮಕಾಲೀನ ಸಮಾಜಿಕ ಬದುಕಿಗೆ ಆಕೆ ಪ್ರತಿಕ್ರಿಯೆ ನೀಡಿದ್ದ ರೀತಿ ಇದೆನ್ನಬಹುದು. ಸಾಂಪ್ರದಾಯಿಕವಾದ ಸಮಾಜದ ಚೌಕಟ್ಟು ಅಂದಿನ ಅಕ್ಕನ ಬದುಕಿನ ರೀತಿ ಆಘಾತಕರವಾಗಿದ್ದಿರಬೇಕು. ಆಗ ಆಕೆ ತಾಳಿದ ನಿಲುವಿನಿಂದ ಸಹಜವಾಗಿ ಆಕೆ ಅನೇಕರ ನಿಂದೆಗೆ ಒಳಗಾಗಿರಬೇಕು. ಈ ಸ್ತುತಿನಿಂದೆಗಳಿಗೆ ಆಕೆ ಪ್ರತಿಕ್ರಿಯಿಸಿರಲಿಕ್ಕಿಲ ಇಂಥ ಲೌಕಿಕ ನಿಂದೆ, ತಿರಸ್ಕಾರ, ಮಾತುಗಳಿಗೆ ಸಮಾಧಾನವನ್ನು ತಂದುಕಂಡು ಅವುಗಳನ್ನು ಎದುರಿಸುವ ಗಟ್ಟಿತನ ತೋರಬೇಕೆಂಬ ಸಂದೇಶ ಇಲ್ಲಿ ನೀಡಿದ್ದಾಳೆ. ಇದರೊಂದಿಗೆ ನಿಂದಿಸುವವರನ್ನು ಮೃಗಗಳಿಗೆ ಹೋಲಿಕೆ ಮಾಡಿರುವ ರೀತಿ ಸುಂದರವಾಗಿದೆ.

ಈ ಸೌಂದರ್ಯವು ಕೇವಲ ವಸ್ತು ಜನಿತವು ಅಲ್ಲ; ಕೇವಲ ಮನೋಜನಿತವೂ ಅಲಿಲ್ಲ ವಸ್ತುವಿಗೂ ವ್ಯಕ್ತಿಯ ಮನಸ್ಸಿಗೂ ಇರುವ ಒಂದು ಸಂಬಂಧವೆಂಬುದು [೧೩] ಇಲ್ಲಿ ಗಮನಾರ್ಹ ಸಂಗತಿ ಅಕ್ಕನ ವಚನ ರಚನೆಯಲ್ಲಿ ಬರಿಯ ಭಾವವೊಂದು ಇಲ್ಲ; ಹಾರಿದ್ದರೆ

*೧೨೧ಅಕ್ಕನ ವ. ೨೫೩ ಪು. ೭೮*

*೧೩ಜಿ.ಶ್ರೀನಿವಾಸನ್-ಸೌಂದರ್ಯ ಮೀಮಾಂಸೆ – ೧೯೭೩ ಪು.೨೬*

ಭಾವಪರವಶತೆಯನ್ನುಂಟು ಮಾಡಬಲ್ಲ ಒಂದು ಕೃತಿ ರಚನೆಯೆನಿಸುತ್ತಿತ್ತು. ಅದರಲ್ಲಿ ಸಾಹಿತ್ಯ ಸೃಷ್ಟಿಯ ಗುಣ ಕಾಣದೆ ಹೋಗುತ್ತಿತ್ತು. ಇದಾಗಬೇಕಾದರೆ ಅದಕ್ಕೆ ಬಾಳಿನ ಆಳವಾದ ಹಿನ್ನೆಲೆ ಇರಬೇಕು. ಬಾಳನ್ನು ವಿಶಾಲವಾಗಿ ಕಂಡು ಅನುಭವಿಸಿದ ಸಂಪದ್ಭರಿತ ಮನಸ್ಸುಬೇಕು. ಕಲ್ಪಕಲೆಯಾ ಇರಬೇಕು. ಆತ್ಮಾನುಸಂಧಾನಕ್ಕಾಗಿ ವಿಫಲವಾದ ಹೋರಾಟ ನಡೆಸಿರಬೇಕು. ಅಂತಹ ಹೋರಾಟ ನಡೆಸಿದ್ದರ ಪ್ರಜ್ಞೆ ಸದಾ ಜಾಗೃತವಾಗಿರಬೇಕು. [೧೪] ಎಂಬುದನ್ನು ನಾವಿಲ್ಲಿ ಅರಿಯಬೇಕು. ಶ್ರೀ ಅರವಿಂದರ ಈ ವೃತ್ತಿಯನ್ನು ಆಧರಿಸಿ ನಾವು ಅಕ್ಕನ ಸಾಹಿತ್ಯವನ್ನು ಪರಿಶೀಲಿಸುವಾಗ ಆ ಸಾಹಿತ್ಯ ಸೃಷ್ಠಿ ಘನವಾದುದೆಂದು ಸ್ಪಷ್ಟವಾಗುತ್ತದೆ. ಯಾಕಂದರೆ ಅಕ್ಕಮಹಾದೇವಿ ಐಹಿಕ ಜೀವನದ ವಿವಿಧ ಮುಖಗಳನ್ನು ಕಂಡಿದ್ದಾಳೆ. ಅನುಭವಿಸಿದ್ದಾಳೆ,ಇದರ ಫಲವಾಗಿ ಅವಳ ಮನಸ್ಸು ಸಂಪತ್ಭಂತವಾಗಿದೆ. ಆತ್ಮಾನು ಸಂಧಾನಕ್ಕಾಗಿ ಅವಳು ನಡೆಸಿದ ಸಂಘರ್ಷ ಅಮೋಘವಾದುದು. ಅಂತಹ ಹೋರಾಟದ ಪ್ರಜ್ಞೆ ಅವಳಲ್ಲಿ ಸದಾ ಜಾಗ್ರತವಾಗಿದೆ. ಆ ಸಂಘರ್ಷದ ಹಲವು ಮುಖಗಳ ಪರಿ ಅವಳ ವಚನಗಳಲ್ಲಿ ಹೃದಂಗಮವಾಗಿ ಮೂಡಿ ಬಂದಿದೆ. ಅಂತಹ ಚಿತ್ರವನ್ನಿಲ್ಲಿ ಕಾಣಬಹುದು.

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ
ತನ್ನ ನೂಲು ತನ್ನನೆ ಸುತ್ತಿ ಸಾವಂತೆ
ಮನ ಬಂದುದನು ಬಯಸ್ಸಿ ಬೇವುತ್ತಿದ್ದೆನಯ್ಯಾ
ಎನ್ನ ಮನದ ದುರಾಶೆಯ ಮಾಣಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನಾ *ಅಕ್ಕನ ವ.೧೯೫ ಪು.ಸಂ.*

ಈ ವಚನದಲ್ಲಿ ತುಂಬಿರುವ ಧ್ವನಿಶಕ್ತಿಯನ್ನು ಪರಿಭಾವಿಸಬೇಕು. ಮಾಯದ ಸಂಸಾರದಲ್ಲಿ ಸಿಲುಕಿದ ತನ್ನನ್ನು ಕಾಯುವಂತೆ ಮಾಡೆಂದು ತನ್ನ ಮಲ್ಲಿಕಾರ್ಜುನನ್ನು ಪರಿಪರಿಯಾರಿ ಬೇಡುವ ಚಿತ್ರ ಇಲ್ಲಿದೆ ಸೋಗಸಾದ ರೂಪಕವನ್ನಿಟ್ಟು ಕೊಂಡು ತನ್ನ ಮನಸ್ಸಿಗೆ ತೋಳಲಾಟವನ್ನು ಬಿಚಿಟ್ಟಿ ಹೇಳಿರುವ ಈ ವಚನ ಅಕ್ಕನ ಶ್ರೇಷ್ಠ ಕಾವ್ಯ ಶಕ್ತಿಯ ಕುರುಹು ಆಗಿದೆ. ಅಕ್ಕಮಹಾದೇವಿಯೂ ಬಸವಣ್ಣನವರಂತೆ ತನ್ನನ್ನು ತಾನು ನಿಷ್ಠುರವಾಗಿ ಸ್ವವಿಮರ್ಶೆಗೆ ಒಳಪಡಿಸಿಕೊಂಡದ್ದನ್ನು ಈ ವಚನ ಸ್ಪಷ್ಟ ಪಡಿಸುತ್ತದೆ.

ತನ್ನ 'ಮಾನಸಿಕ ತೊಳಲಾಟ'ದ ಒಳಗಣ ಕೋಟಲೆಯನ್ನು ಮುಚ್ಚು ಮರೆ ಇಲ್ಲದೇ ಬಿಚಿಡುವ ರೀತಿ ಕಣ್ಣಿಗೆಕಟ್ಟುತ್ತದೆ 'ತೆರಣಿಯಹುಳು' ವಿನ ರೂಪಕ ಅಭಿವ್ಯಕ್ತಿಯು ಅಕ್ಕನ ಬದುಕನ್ನು ಪರಿಶೀಲಿಸುವಂತೆ ಮಾಡುವದರಲ್ಲಿ ಸಾಫಲ್ಯ ಹೊಂದುತ್ತದೆ. ಅಕ್ಕನದು ಸಿದ್ಧ, ವೈರಾಗ್ಯವಲ್ಲ, ಸಿದ್ಧಿಸಿಕೊಂಡ ಸಾಧನೆಯ ಬದುಕು ಮಾನವೀಯ ದೇಹದ ಮನಸ್ಸಿನ ಮೂಲಕ ಅಕ್ಕ ಸಿದ್ಧಿಯ ಒಂದೊಂದು ಮೆಟ್ಟಲುಗಳನ್ನು ಏರುವಾಗ ಹಲವಾರು ಸಂಘರ್ಷಗಳನ್ನು ಎದುರಿಸಿದ್ದಾಳೆ. ಆ ಹೋರಾಟದ ಒಂದು ರೀತಿಯನ್ನು ಸಾಕ್ಷಾತ್ಕರಿಸಿರುತ್ತದೆ. ಈ ವಚನ ಈ ಲೋಕದ ಸೆಳೆತದಿಂದ

*೧೪) ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನಸಿದ್ಧಿ – ಕ.ವಿ.ವಿ. ೧೯೭೬ ಪು. ೬೨*

ಪಾರಾಗಲು ಬಯಸುವ ಆಕೆ ಸದಾ ಚನ್ನಮಲ್ಲಿಕಾರ್ಜುನನ ಕೃಪೆಗಾಗಿ ಅಂಗಲಾಚುತ್ತಾಳೆ.

'ಈ ಮರ್ತ್ಯದವಾಸ' ಸಹಜ ವಾದುದಲ್ಲ; ಸಂಸಾರ ಸಾಗರವಿದು. ತೆರಣಿಯ ಹುಳು ಮನೆ ಮಾಡಿಕೊಂಡು ಅದರಲ್ಲಿಯೇ ಬಿದ್ದು ಸಾಯುವಂತೆ ಇಲ್ಲಿಯ, ಸ್ಥಿತಿ ಇಂತಹ 'ಸಂಸಾರ' ಕುರಿತ ಅಕ್ಕನ ಅನೇಕ ವಚನಗಳು ಇದರ ಅಪಾಯವನ್ನು ಅಥವಾ 'ಮಾಯೆ'ಯನ್ನು ನಿರೂಪಿಸುತ್ತವೆ ಹಿಂದಣಹಳ್ಳ, ಮುಂದಣತೊರೆ ಸಲ್ಲುವ ಪರಿಯೆಂತು' ಎಂಬುದೇ ಆಕೆಯ ಚಿಂತೆಯೆಂಬುದನ್ನು ಇಲ್ಲಿ ಕಾಣುವದರೊಂದಿಗೆ 'ನೀನಿಕ್ಕಿದ ಮಾಯೆ ಕೊಲುತ್ತಿಪ್ಪದು' ಕಾಯಯ್ಯ ಕಾಯಯ್ಯ ಎಂಬುದೇ ಆಕೆಯ ನಿವೇದನೆಯಾಗಿದೆ.

ಕಾಯದ ಮೇಲಿನ ಅಭಿಮಾನದಿಂದ ಕಾಮದ ಸೋಂಕಿನಿಂದ ಮಹಾದೇವಿ ಮುಕ್ತಿ ಪಡೆದಿದ್ದಳೆಂದು ಹೇಳಬಹುದಾದರೂ ಒಳಗಣ ಒತ್ತಡ ಅವಳಿಗೆ ಇನ್ನೂ ಕಾಡುತ್ತಿರುವದನ್ನು ಅವಳ ವಚನಗಳು ತೋರುತ್ತವೆ. ಆಕೆ ಅನುಭವಿಸುವ ಆ ಒಳತುಡಿತ ಒಂದನ್ನು ಈ ಕೆಳಗಿನ ವಚನ ಅದ್ಭುತವಾಗಿ ಹೊರಹಾಕುತ್ತದೆ.

ಕೊಳಲ ದನಿಗೆ ಸರ್ಪ ತಲೆದೂಗಿದಡೇನು
ಒಳಗಣ ವಿಷದ ಬಯಕೆ ಬಿಡದನ್ನಕ್ಕ?
ಹಾಡಿದಡೇನು ಕೇಳಿದಡೇನು
ತನ್ನಲುಳ್ಳ ಅವಗುಣ ಬಿಡದನ್ನಕ್ಕ?
ಒಳಗ ನರಿದು ಹೊರಗೆ ಮೆರೆದವರ
ನೀ ಎನಗೆ ತೋರಯ್ಯಾ ಚೆನ್ನಮಲ್ಲಿಕಾರ್ಜುನಾ.

*ಅಕ್ಕನ ವ. ೧೦೭ ಪು. ೫೫*

ಒಂದು ಆತ್ಮದ ಬೆಳವಣಿಗೆಯ ಕಥೆಯನ್ನು ಕಟ್ಟಿಕೊಡುವ ದೃಷ್ಟಿಯಿಂದ ಅಕ್ಕನು ಬಳಸಿಕೊಳ್ಳುವ ಪ್ರಾಣಿ ಸಂಸ್ಕೃತಿ ಬಹು ಮಹತ್ವದ್ದಾಗುತ್ತದೆ. ಅಂಥ ವಚನಗಳಲ್ಲಿ ಕಂಡು ಬರುವ ಭಕ್ತಿಭಾವ ಸ್ರೋತವು, ಮಾತಿನ ವಿಲಾಸವು ಬಸವಣ್ಣನ ಹೊರತಾಗಿ ಬೇರೆ ಯಾವ ವಚನ ಕಾರರಲ್ಲಿಯಾ ಇಷ್ಟು ಸುಂದರವಾಗಿ ಕಂಡು ಬರುವದಿಲ್ಲ ಇಂಥ ವಚನಗಳಲ್ಲಿ ಹೆಚ್ಚಾಗಿ ಅವಳ ಕಾವ್ಯದ ಗುಣಗಳು ಎರಡು, ಒಂದು ವೇದನೆ.

ಇನ್ನೊಂದು ಮಲ್ಲಿಕಾರ್ಜುನನಲ್ಲಿ ನಿವೇದನೆ [೧೫] ಯಾಗಿರುತ್ತದೆ. ಅಂಥ ಸಂದರ್ಭವನ್ನು ನಿರೂಪಿಸುವ ಈ ವಚನ 'ಸರ್ಪ'ವನ್ನು ದೃಷ್ಟಾಂತವಾಗಿರಿಸಿಕೊಂಡು ಮಾನವನಲ್ಲಿರುವ ವಿಷಯದ ಅವಗುಣವನ್ನು ತೋರುತ್ತದೆ. ಸ್ವಭಾವ ವಿರಾಗಿಯಾಗಿದ್ದು ಪಾರಮಾರ್ಥಿಕ ಜೀವನಾಭಿಲಾಷೆಯಾಗಿದ್ದ ಮಹಾದೇವಿಯ ಮಾನವ ಪರಿಸರದಲ್ಲಿ ನಿಂತು ತನ್ನ ಸಾಧನೆಗಾಗಿ ನಡೆಸಿದ ಅಂತರಂಗದ ಹಾಗೂ ಬಹಿರಂಗದ ಹೋರಾಟದ ಹೆಜ್ಜೆಗುರುತನ್ನು ಇದು ತೋರಿಸುತ್ತದೆ.

*೧೫) ಎಂ. ಚಿದಾನಂದಮೂರ್ತಿ–'ವಚನಸಾಹಿತ್ಯ–೧೯೭೫–ಪು.೪೭*

ಅಕ್ಕನ ವಚನಗಳಲ್ಲಿ ಬರುವ ಪ್ರಾಣಿ ದೃಷ್ಟಾಂತಗಳು ದೈನಂದಿನ ಜೀವನ ದಿಂದಾಯ್ದುಕೊಂಡ ಸಜೀವ ಉದಾಹಣೆಗಳು ಅವುಗಳಲ್ಲಿ ಅಕ್ಕ 'ಸರ್ಪ' ಹಾಗೂ 'ಕಪ್ಪೆ' ಯನ್ನು ಹೆಚ್ಚಾಗಿ ಬಳಸಿಕೊಂಡಿದ್ದಾಳೆ. ಸರ್ವಾರ್ಪಣೆ ಭಾವದ ಉತ್ಕಟ ಭಕ್ತಿಯ ಅವಳು ತನ್ನ ದೈವೀ ಹಂಬಲ ವಿರಹವಿಯೋಗ, ಅರಿಕೆ ಅರ್ಪಣೆಗಳನ್ನು ಪ್ರತಿಪಾದಿಸುವ ಸಂದರ್ಭಗಳಲ್ಲಿ ಆಸ್ಥಿತಿಯನ್ನು ಸಶಕ್ತವಾಗಿ ಅಭಿವ್ಯಕ್ತಿಸುವಲ್ಲಿ ಈ ದೃಷ್ಟಾಂತಗಳು ಪರಿಣಾಮಕಾರಿಯಾಗಿ ಬಳಕೆಯಾಗಿರುವುದನ್ನು ಎಲ್ಲೆಲ್ಲೂ ಗುರುತಿಸಬಹುದಾಗಿದೆ. ಅಂಥ ಒಂದು ವಚನವು ಹೀಗಿದೆ.

ಸರ್ಪನ ಬಾಯ ಕಪ್ಪೆ ನೊಣಕ್ಕೆ ಹಾರುವಂತೆ
ಅಪ್ಯಾಯನ ಬಿಡದು
ಕಾಯವರ್ಪಿತವೆಂಬ ಹುಸಿಯ ನೋಡಾ
ನಾನು ಭಕ್ತಳೆಂಬ ನಾಚಿಕೆಯ ನೋಡಾ
ನಾನು ಯುಕ್ತಳೆಂಬ ಹೇಸಿಕೆಯ ನೋಡಾ
ಓಗರ ವಿನ್ನಾಗದು, ಪ್ರಸಾದ ಮುನ್ನಿಲ್ಲ
ಚನ್ನ ಮಲ್ಲಿಕಾರ್ಜುನಯ್ಯಾ ಉಪಚಾರವರ್ಪಿತವನವಗಡಿಸಿ ಕಳೆದ

*ಅಕ್ಕನ ವ. ೬೨೧ ಪು. ೧೦೧*

ಮನುಷ್ಯನಲ್ಲಿ ಕಾಣುವ ಧಾರ್ಮಿಕ ಪ್ರಜ್ಞೆ ಅವನ ದಿನ ನಿತ್ಯದ ವ್ಯಾವಹಾರಿಕ ಪ್ರಜ್ಞೆಗಿಂತಲೂ ಭಿನ್ನವಾದುದು. ನಮ್ಮ ದೈನಂದಿನ ವ್ಯಾವಹಾರವನ್ನು ಕೌಶಿಕ ಅಥವಾ ಭೌತಿಕ ಪ್ರಜ್ಞೆ ಎಂದು ಕರೆಯುವದಾದರೆ ಈ ಧಾರ್ಮಿಕ ಪ್ರಜ್ಞೆಯನ್ನು ಅಲೌಕಿಕ ಅಥವಾ ಭೌತಾತೀತ ಪ್ರಜ್ಞೆ ಎಂದು ಹೆಸರಿಸಬಹುದು, [೧೬] ದೇವರು, ಆತ್ಮ, ಮೊಕ್ಷ ಮುಂತಾದ ಧಾಮಿರ್ಕಕ ಸಮಸ್ಯೆಗಳ, ವಿಜ್ಞಾನ, ಕಲೆ, ಸಾಹಿತ್ಯದಂತಹ ಭೌತಿಕ ಚಿಂತನೆಯ ವ್ಯಾಪ್ತಿಗೆ ಸಿಲುಕುವದಿಲ್ಲ. ಆದರೂ ಸಹ

ಮನುಷ್ಯನು ಈ ಸಮಸ್ಯೆಗಳ ಬಹು ಸೂಕ್ಷ್ಮತೆಯನ್ನು 'ಅನುಭಾವಕ್ಕೆ ಅಳವಡಿಸಿಕೊಳ್ಳಲು ಲೌಕಿಕ ಸಂದರ್ಭಗಳನ್ನು ಉಪಯೋಗಿಸಿಕೊಳ್ಳಬಹುದು ಅವುಗಳನ್ನು ಗಮನಿಸಬಹುದೆಂಬುದನ್ನು ಅಕ್ಕಮಹಾದೇವಿ ತನ್ನ ಈ ವಚನದಲ್ಲಿ ಕಾಣಿಸಿದ್ದಾಳೆ.

'ಅನುಭಾವವು' ಅಂತರಂಗದ ಪರಿಶುದ್ಧತೆಯ ಫಲವಾಗಿ ಲಭಿಸುವಂತಹ ಅಮೋಘರತ್ನ ಅಥವಾ ಅದೊಂದು ಮಹಾಘನ ಅದು ಜೀವನ ಪರ್ಯಂತ ಸಾಧಕನು ನಡೆಸಿದ ಸಾಧನೆಯ ಫಲ ಈ ಸಾಧನೆಯಲ್ಲಿ ಅರ್ಪಿತವಾಗುವ ತನು, ಮನ, ಧನವು 'ಅರಿವುಳ್ಳ'ದ್ದಾಗಿರಬೇಕೆನ್ನುವ ವಿಚಾರ ಇಲ್ಲಿ ಹೊರಹೊಮ್ಮಿದೆ.

ಹಾವಿನಬಾಯಲ್ಲಿ ಸಿಕ್ಕು ಸಾಯುವ ಸ್ಥಿತಿಯಲ್ಲಿರುವಕಡ್ಡೆ ಹಾರುವ ನೋಣಕ್ಕೆ ಆಶೆ ಪಡುವ ಆಪ್ಯಾಯನದಂತೆ ದೇವರ ಉಪಚಾರ ದರ್ಪಿತವಾಗಬಾರದೆಂಬ ಅರ್ಥ ಇಲ್ಲಿ

*೧೬) ಎ.ಎಲ್. ಶಿವರುದ್ರಪ್ಪ-ಶರಣ ತತ್ವ ಚಿಂತನ-೧೯೯೮, ಪು.೨೪೨-೪೬*

ಮನನೀಯ ವಾಗುತ್ತದೆ. ಈ 'ಹಾವಿನ' ಪ್ರತಿಮೆಯನ್ನು 'ಸಂಸಾರದ' ಬಂಧನವಾಗಿ ಪರಿಗಣಿಸುವ ಅಕ್ಕ ಇನ್ನೊಂದೆಡೆಯಲ್ಲಿ ಇದನ್ನು 'ದೇಹ'ದ ಪ್ರತಿಮೆಯನ್ನಾಗಿ ಬಳಿಸಿಕೊಂಡಿರುವದನ್ನು ಗಮನಿಸಬಹುದು.

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸ ಕಂಡಯ್ಯಾ
ಕಾಯದ ಸಂಗವ ವಿವರಿಸಬಲ್ಲಡೆ
ಕಾಯದ ಸಂಗವೆ ಲೇಸು ಕಂಡಯ್ಯಾ
ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯಾ
ನೀನೊಲಿದವರು ಕಾಯಗೊಂಡಿದ್ದರೆನಬೇಡ

*ಅಕ್ಕನ ವ.೩೪೦ ಪು. ೧೦೯*

ಸಮಾಜ ಶಾಸ್ತ್ರಿಯವಾಗಿ ಮಾನವ ಸಮಾಜವನ್ನು ಅಧ್ಯಯನ ಮಾಡುವಾಗ ಪ್ರಕೃತಿಗೂ, ಪ್ರಾಣಿಗಳಿಗೂ ಮಾನವನಿಗೂ ಇರುವ ನಿಕಟ ಸಂಬಂಧ ಮಾನವನ ದೈಹಿಕ, ಮಾನಸಿಕ ಹಾಗೂ ಸಾಮಾಜಿಕ ಅಂಶಗಳ ನಡುವಿರುವ ಕಾರಣ-ಪರಿಣಾಮಗಳ ಸಂಬಂಧವನ್ನು ನಾವು ಈ 'ಪ್ರಾಣಿ ಸಂಸ್ಕೃತಿಯ' ವಚನಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬಹುದು. ಹೀಗಾಗಿ ಅಕ್ಕಮಹಾದೇವಿಯ ಧಾರ್ಮಿಕ ವಿಚಾರವಾದವನ್ನು ಕುರಿತು ಚಿಂತಿಸುವಾಗ ನಮ್ಮೆದುರಿಗೆ ಮೇಲ್ಕಾಣಿಸಿದಂತಹ ಪ್ರಾಣಿ ಜಗತ್ತು, ಕಾಣಿಸಿಕೊಳ್ಳುತ್ತದೆ. ಗಂಡ ಗಂಡರಲ್ಲರ ಪೆಂಡಿರಾಗಿ ಆಳುವ ಚೆನ್ನಮಲ್ಲಿಕಾರ್ಜುನ ಅಕ್ಕನ ಪತಿ ಒಂದರ್ಥದಲ್ಲಿ ಶರಣ ಸಮಾಹವೇ ಸತಿಯರು 'ಶರಣಸತಿ-ಲಿಂಗಪತಿ' ಎಂಬ ಭಾವವು ಸಮಸ್ತ ವಚನಕಾರರಲ್ಲೆಲ್ಲ ಕಂಡು ಬರುತ್ತದೆ ಪಶು ನಾನು ಪಶು ಪತಿನೀನು ಎಂಬ ಭಾವಕ್ಕಿಂತ ಒಂದು ಹೆಜ್ಜೆ ಮುಂದು ಹೋಗಿ ಶರಣರು 'ಸತಿ-ಪತಿ' ಭಾವವನ್ನು ಅಭಿವ್ಯಕ್ತಗೊಳಿಸಿದ್ದಾರೆ. [೧೭] ಪರಮ ಪತಿವ್ರತೆಗೆ ಗಂಡನೊಬ್ಬನೇ ಹೇಗೋ ಹಾಗೆ ಶರಣರಿಗೆ ಅವರ ಇಷ್ಟದೈವವೇ ಎಲ್ಲ ಸರ್ವಸ್ವ ಹಾಗಾಗಿ ಆ ಶರಣರು ಮಾಡುವ ಪ್ರತಿಯೊಂದು ಕಾರ್ಯವು ತನ್ನ ಇಷ್ಟ ದೈವಕ್ಕೆ ಸಮರ್ಪಿತವಾಗುತ್ತದೆ. ಶರಣರ ಗುರಿಯೆಲ್ಲವೂ ತನ್ನೊಡೆಯನನ್ನು ಸೇರುವದೇ ಆಗಿದೆ. ಅಕ್ಕನೂ ಸಹ ಇದಕ್ಕೆ ಹೊರತಾಗಿಲ್ಲವೆನ್ನ ಬಹುದು, "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ಒಲಿದಿರುವ ಅವಳು ತನ್ನ ಲೌಕಿಕವಾದದ್ದನೆಲ್ಲ ಆ ಕುರುಹಿಲ್ಲದ ಚಲುವಂಗೆ "ಒಪ್ಪಿಸಿದ್ದಾಳೆ. ಆತನ್ನ" ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ ಮಿಕ್ಕಿದ ಗಂಡರೆಲ್ಲ ಮುಗಿಲಮರೆಯ ಬಣ್ಣದ ಬೊಂಬೆಯಂತೆ [೧೮] ಎಂದು ಹೇಳುವ ಅಕ್ಕ ಆತನೋಲಿದವರನ್ನು ಕಾಯಗೊಂಡಿದ್ದರೇನ ಬೇಡ ಎಂದು ನಿವೇದಿಸುವ ಪರಿ ಇಲ್ಲಿದೆ.

*೧೭. ಸ.ಕ.ಸಾ.ಚರಿತ್ರೆ ಬೆಂಗಳೂರು ವಿ.ವಿ. ಸಂ. ೩ ಪು.ಸಂ. ೧೪೬.*

*೧೮. ಶಿವಶರಣೆಯರ ವಚನಗಳು ಅಕ್ಕನ ವ. ೬೫ ಪು. ೨೫.*

ವ್ಯಕ್ತಿಯ ಭಕ್ತಿ ಸಾಧನೆಯ ಮಹಾ ಪಥವೇ ಕಾಯ 'ಶರಣಂಗೆ ಭಕ್ತಿ ಕಾಯವಿಲ್ಲದನ್ನಕ ಕೂಡಲ ಸಂಗಯ್ಯನರಿವ ಪರಿಯಂತೊ" ಎಂದು ಕೇಳುತ್ತಾರೆ ಬಸವಣ್ಣನವರು. "ಕಾಯ"ವೆಂಬುದು ಶರಣರ ದೃಷ್ಟಿಯಲ್ಲಿ ಶಿವನ ನೆಲೆ ಅದು ಪ್ರತಿಯೊಬ್ಬನ ಬದುಕಿನ ಧರ್ಮ. ಮಾನವನ ಎಲ್ಲ ಸಾಕ್ಷಾತ್ಕಾರಗಳ ಮೊದಲ ಅವಶ್ಯಕತೆ ಭಕ್ತಿಯ ಗಟ್ಟಿಯಾದ ಹಗ್ಗಹಿಡಿದು ಸಾಧನೆಯ ಮೆಟ್ಟಲನ್ನು ಸಾವಧಾನದಿಂದ ಹತ್ತುತ್ತಸಾಗಿ, ತಾನೇ ಶಿವನೆಂಬ ನೆಲೆಗಾಣಲು 'ದೇಹ' ಮುಖ್ಯವಾದ ನೆಲೆ ಎಂಬುದು ಶರಣರ ಚಿಂತನೆ [೧೯] ಅಂತೆಯೇ ಅದು ವಿಕಾರಗೊಳದಂತೆ ಕಾಪಾಡಿಕೊಳ್ಳಬೇಕು. ಕಾಯದ ಕಳವಳವು ವಿಪರೀತವಾದುದು. ಅದಕ್ಕೆ ಅಕ್ಕಮಹಾದೇವಿ ಆ ಕಾಯವನ್ನು "ಹಾವಿಗೆ" ಹೋಲಿಸುತ್ತಾಳೆ. ಹಾವಿನ ವಿಷದ ಹಲ್ಲನ್ನು ತೆಗೆದು ಅದನ್ನು ಆಡಿಸಬಲ್ಲಡೆ ಅದರ ಸಂಗವು ಲೆಸಾಗುತ್ತದೆ. ಹಾಗೆಯೇ 'ಕಾಯ ವಿಕಾರವನ್ನು ದೂರ ಗೊಳಿಸಬೇಕು. ಅದನ್ನೇ ಶರಣರು "ಕಾಯ ವಿಕಾರ ಕಾಡಿಹುದಯ್ಯ, 'ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು' 'ಕಾಯದೊಳಗೆ ಕರುಳುಳ್ಳಕ್ಕರ ಹಸಿವು ಮಾಣದು' ಎಂಬಂತಹ ಅನೇಕ ವಚನಗಳಲ್ಲಿ ಈ ಕಾಯಕದ ಕಳವಳವನ್ನು ವ್ಯಕ್ತಗೊಳಿಸಿದ್ದಾರೆ. ಈ ಕಾಯದ ಕಳವಳವನ್ನು ದಾಸೋಹದ ಮುಖದಲ್ಲಿ ಹರಿಯಬೇಕೆಂದು ಬಸವಣ್ಣ ಹೇಳಿದರೆ. ಕಾಯಕ್ಕೆ ಮಜ್ಜನ, ಪ್ರಾಣಕ್ಕೆ ಓಗರ ಇದ ಮಾಡಲೇಬೇಕು' ಎಂದು ಅಲ್ಲಮ ಪ್ರಭು ತಿಳಿಸುತ್ತಾನೆ. ಅಕ್ಕಮಹಾದೇವಿಯು ಸಹ ಇದೇ ಅರ್ಥದಲ್ಲಿ 'ದೇಹದ ನಿರಾಕರಣೆಯನ್ನು ಒಪ್ಪುವದಿಲ್ಲ 'ಕಾಯದಲ್ಲಿ ಒಳ ಹೊರಗನ್ನು ಕಾಣಿಸುವ ಅಕ್ಕ ಅದರ ಸಂಗವನ್ನು ವಿವರಿಸಿ ಹೇಳುವದಿರೊಂದಿಗೆ ಆ ಕಾಯದ 'ಲಜ್ಜೆ' ತನವನ್ನು ಕಳಿಯಬೇಕೆನ್ನುತ್ತಾಳೆ. ಹೀಗೆ ಈ ಕಾಯದ ಲಜ್ಜೆಯ ಕಲ್ಪಿತವ ಕಳೆದು ಕೊಂಡಿರುವ ಅಕ್ಕ ಈ ಕಾಯದಲ್ಲಿ ಯಾವುದೇ ವಿಕಾರವಿಲ್ಲದ್ದರಿಂದ ಅದು ಲಿಂಗಾರ್ಪಿತ. ಅದು ನಿರಾಕರಣೀಯವಲ್ಲವೆಂಬುದನ್ನು ಸ್ಪಷ್ಟಪಡಿಸುವುದರೊಂದಿಗೆ ದೇವನಿಗೂ ತಿಳಿಸುತ್ತಾಳೆ.

ಹಾವಿನ ಹಲ್ಲಿನಲ್ಲಿ ತುಂಬಿ ಕೊಂಡಿರುವ ವಿಷದಂತೆ ಕಾಯದಲ್ಲಿ ತುಂಬಿಕೊಂಡಿರುವ ವಿಕಾರವು 'ಅಂತರಂಗ ಶುದ್ಧಿ'ಯನ್ನು ಮಾಡಿಕೊಳ್ಳಲುತಿಳಿಸುವ ದೃಷ್ಟಾಂತವೆನ್ನಬಹುದು.

ಧರ್ಮಬೋಧನೆ, ನೀತಿ ನಿರೂಪಣೆ ಹಾಗೂ ಆತ್ಮ ನಿವೇದನೆಗಳೆ ವಚನದ ಮುಖ್ಯ ಉದ್ದೇಶವಾಗಿದ್ದರೂ ಸಹ ಅವು ಶುಷ್ಕವಾದ ಮತ್ತು ಮತ್ತು ನೀರಸವಾದ ಸಾಹಿತ್ಯದ ಗುಂಪಿಗೆ ಅವು ಸೇರುವುದಿಲ್ಲ ಹೃದಯದ ಅಂತರಾಳದಿಂದ ಹೊರಹೊಮ್ಮಿನಿಂತ ಅವುಗಳಲ್ಲಿ ಮಾಧುರ್ಯ ತುಂಬಿ ತುಳುಕುತ್ತದೆ. ಓದಿದವರ ಮನತಟ್ಟಿ ಒಳಹೋಗುವ ಶಕ್ತಿಯನ್ನು ಅವು ಹೊಂದಿ ನಿಲ್ಲುತ್ತವೆ. ಶರಣರಲ್ಲಿಯ ದಾರ್ಶನಿಕ ದೃಷ್ಟಿ ಹಾಗೂ ಲೋಕಾನುಭವ ಅವರನ್ನು ಕವಿಗಳನ್ನಾಗಿ ಮಾಡಿದೆ. ಅಂಥವರಲ್ಲಿ ಮಹಾದೇವಿಯಕ್ಕ ಒಬ್ಬ ಶ್ರೇಷ್ಠ ಮಟ್ಟದ ಕವಯಿತ್ರಿ 'ಅಕ್ಕನ ಜೀವನವೇ ಒಂದು ರುದ್ರ



೧೯. *ಸೋಮನಾಥ ಯಾಳವಾರ - ಶರಣ ಸಿರಿ ೨೦೦೬ ಪು. ೨*

ರಮಣೀಯವಾದ ಕಾವ್ಯ[20]ದಂತಿರುವಾಗ ಅವಳ ಆ ಅನುಭವವನ್ನು ಹೊತ್ತು ಅಂತಃ ಸ್ಮರಣೆಯಿಂದ ಹೊರ ಹೊಮ್ಮಿದ ವಚನಗಳಲ್ಲಿ ಕಾವ್ಯತ್ವ ತುಂಬಿ ನಿಂತಿದೆ. ತನ್ನ ಇಷ್ಟ ದೇವರಿಗಾಗಿ ಅವಳು ಪಡುವ ಬವಣೆ, ಅನುಭವಿಸುವ ವಿರಹ, ನೊಂದ ನೋವು ಇವೆಲ್ಲ ಸಹಜವಾಗಿ ಅವಳ ವಚನ ರೂಪಕದಲ್ಲಿ ಸೂರೆಗೊಂಡಿವೆ. ಅದರಲ್ಲಿಯೂ ಅವಳು ತನ್ನ ಅನುಭಾವ ನಿರೂಪಣೆಗೆ ಅವಳು ಬಳಸಿಕೊಳ್ಳುವ 'ಪ್ರಾಣಿ' ಸ್ವಭಾವ ಚಿತ್ರಣ ಓದುಗರ ಕಣ್ಮನ ಸೇಳೆಯುತ್ತವೆ.

ಹಿಂಡನಗಲಿ ಹಿಡಿವಡೆದ ಕುಂಜರ
ತನ್ನ ವಿಂಧ್ಯವ ನೆನೆವಂತೆ, ನೆನೆವೆನಯ್ಯಾ
ಬಂಧನಕ್ಕೆ ಬಂದ ಗಿಳಿ
ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ
ಕಂದಾ ನೀನಿತ್ತ ಬಾ ಎಂದು
ನೀವು ನಿಮ್ಮಂದವ ತೋರಯ್ಯಾ ಚೆನ್ನಮಲ್ಲಿಕಾರ್ಜುನ

*ಅಕ್ಕನ ವ. ೩೮೧.*

ಅಕ್ಕಮಹಾದೇವಿ ಮುಖ್ಯವಾಗಿ ಭಕ್ತಿ ಅದರಲ್ಲೂ ಭಾವುಕ ಭಕ್ತಿ ಅವಳದು ಆನಂತರ ಅವಳು ವಿಚಾರವಾದಿ ಸಾಧನೆಯ ಒಂದೊಂದೇ ಮೆಟ್ಟಿಲನ್ನು ಏರಿದ ವಿರಾಗಿಣಿ "ಸಾವ ಕೇಡು ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ತನ್ನ ತಂದೆ ತಾಯಿಗಳನ್ನು, ಸಮಾಜವನ್ನು ತಿರಸ್ಕರಿಸಿ ಹೊರಟು ನಿಂತ ಅಕ್ಕ ಉರಿ ಇಲ್ಲದ ಬೆಂಕಿಯಲ್ಲಿ ಬೇಯುತ್ತ, ತನ್ನೆಲ್ಲ ವಿಕಾರಗಳನ್ನು ಶಾರೀರಿಕ ಬಾಧೆಗಳನ್ನು, ಅರಿಷಡ್ವರ್ಗಗಳನ್ನು ದೂರವಿರಿಸಿ ತನ್ನೊಡೆಯ ಚೆನ್ನಮಲ್ಲಿಕಾರ್ಜುನನ್ನು ಹುಡುಕುತ್ತಾಳೆ. ಆ ಸಂದರ್ಭದಲ್ಲಿ ಹಸಿವು, ತೃಷೆ, ನಿದ್ರೆ, ಕಾಮ, ಕೋಧ, ಮೋಹ, ಲೋಭ ಮಧಮತ್ಸರ, ಗಳನ್ನೆಲ್ಲಾ ನಿಲ್ಲಿಸಿ, ಸಚರಾಚರವನ್ನು ಕೇಳುತ್ತ ಆತನನ್ನು ಹುಡುಕುತ್ತಾಳೆ.

ಆ ಸಂದರ್ಭದಲ್ಲಿ ರಚನೆಯಾಗಿರಬಹುದಾದ ಈ ವಚನವು ಬಂಧನಕ್ಕೊಳಗಾಗಿರುವ 'ಮದ್ದಾನೆ' ಹಾಗೂ 'ಗಿಳಿ' ಗಳನ್ನು ದ್ರಷ್ಟಾಂತವಾಗಿರಿಸಿಕೊಂಡು ತನ್ನ ಸ್ಥಿತಿಯನ್ನು ಮನಂಬುಗುವಂತೆ ಇಲ್ಲಿ ನಿರೂಪಿಸಿದ್ದನ್ನು ಅರಿಯಬಹುದು.

ಆತ್ಮ ಪರಮಾತ್ಮರ ಮಥನದಲ್ಲಿ ಹುಟ್ಟಿ ಕೊಳ್ಳುವ ಅನುಭಾವದ ಬೆಳಕಿಗಾಗಿ ನಿರಂತರ ತಪಿಸಿರುವ ಅಕ್ಕನಿಗೆ ದೇಹ-ಮನಸ್ಸು-ಪ್ರಾಣಗಳಾಚೆ ಇಂದ್ರೀಯಾತೀತ ಪ್ರಪಂಚದೊಡನೆ ಅನುಸಂಧಾನಿಸುವ ಸಾಧನೆ ಮಾರ್ಗದಲ್ಲಿ ಪ್ರಾಣಿ ಪ್ರಪಂಚದ ಸಹಜತೆಯನ್ನು ತೋರಿಸಿರುವ ಸಾಧ್ಯತೆಯನ್ನು ಗಮನಿಸಿರುವ ರೀತಿಯಾನುಭಾವ 'ವಾಗಿದೆ' ಸಂಸಾರಿಕ ಬಂಧನಗಳನ್ನು ಸ್ತ್ರೀ ಸಹಜ ಲಜ್ಜೆ ಮಾನಾಪಮಾನಗಳನ್ನು ದೇಹ-ಜೀವ ಭಾವದ ಸೆಳೆತಗಳನ್ನು ನಿಗ್ರಹಿಸುವ

*೨೦. ಸ.ಕ.ಸಾ.ಚರಿತ್ರೆ-೧೯೭೬ ಬೆ.ವಿ.ವಿ. ಪು. ೧೪೭*

ಗೆಲ್ಲುವ ಪ್ರಯತ್ನದಲ್ಲಿ. ಆಗಾದ ಕಷ್ಟ ನಿಷ್ಠುರತೆಗಳನ್ನು ಅನುಭವಿಸಿರುವುದನ್ನು ಇಲ್ಲಿ ತೋರಿಸುತ್ತ [೨೧] ಅವಳು ಸತ್ಯಾನ್ವೇಷಣೆಯ ಮಾರ್ಗದಲ್ಲಿ ಮುನ್ನಡೆದಿರುವುದನ್ನು ಕಂಡು ಕೊಳ್ಳಬಹುದಾಗಿದೆ.

೨೧. ಶಾಂತಾ ಇಮ್ರಾಪೂರ – ಉಡತಡಿಯ ಮಹಾದೇವಿಯಕ್ಕ – ಪು. ೬೩

# ಪಕ್ಷಿ ಸಂಸ್ಕೃತಿ

ಕನ್ನಡ ಸಾಹಿತ್ಯಕ್ಕೆ ಒಂದು ವೈಯಕ್ತಿಕ ಪ್ರಪಂಚ ಬಂದಿದ್ದೇ ವಚನಕಾರರಿಂದ. ಈ ಸಾಹಿತ್ಯದಲ್ಲಿ ಕಾಲ್ಪನಿಕ ಜಗತ್ತಿಗಿಂತ ವ್ಯಕ್ತಿಯ ಒಳ ಜಗತ್ತಿನ ಚಿತ್ರಣ ದೊರಕುತ್ತದೆ. ಉಳಿದ ಸಾಹಿತ್ಯದಲ್ಲಿ ಜಗತ್ತಿನ ಕನ್ನಡಿಯ ಚಿತ್ರ ದೊರಕಬಹುದು. ಆದರೆ ವ್ಯಕ್ತಿಯ ಅಂತರಂಗಕ್ಕೆ ಸಂಬಂಧಿಸಿದಂತೆ ಒಂದು ಜಗತ್ತು ಅಲ್ಲಿ ಮೂಡಿಲ್ಲ. ವಚನಕಾರರು ಅಂತಹ ಜಗತನ್ನು ತಮ್ಮ ಸಂವೇದನೆಗೆ ಒಳಗಾದ ಜಗತ್ತನ್ನು ಕನ್ನಡಕ್ಕೆ ತಂದರು. ವ್ಯಕ್ತಿಯ ವೇದನೆ, ಸಂವೇದನೆಗಳೆರಡೂ ನಿಜವಾದ ಅರ್ಥದಲ್ಲಿ ಕನ್ನಡಕ್ಕೆ ಬಂದದ್ದು 'ವಚನಕಾರರ ಮೂಲಕವೇ [೧] ಎನ್ನಬಹುದು. ಸಾಹಿತ್ಯದ ದೃಷ್ಟಿಯಿಂದ ವಚನಕಾರರಿಗಿಂತ ವಚನಗಳು ಮುಖ್ಯವಾಗುತ್ತವೆ. ಆ ವಚನಗಳು ಸಾಮಾಜಿಕ ಧಾರ್ಮಿಕ ಕ್ಷೇತ್ರದಲ್ಲಿ ವಚನಕಾರರು ಉಂಟು ಮಾಡಿದ ಕ್ರಾಂತಿಯ ಉಪಕರಣಗಳಾಗಿವೆ. ಅಂತಹ ಸಂದರ್ಭಗಳನ್ನು ಅಕ್ಕ ಮಹಾದೇವಿಯ 'ಪಕ್ಷಿ ಪ್ರಪಂಚದ' ಉಪಮಾನಗಳುಳ್ಳ ವಚನಗಳಿಲ್ಲಿ ಕಾಣಬಹುದು.

ಭಾವದ ಮರೆಯಲ್ಲಿ ಬ್ರಹ್ಮವಾಗಿರುವ ಪರಮಾತ್ಮ ಸರ್ವಾಂತರ್ಯಾಮಿ ಎನ್ನುವ ಶಾಶ್ವತ ಸತ್ಯವನ್ನು ಮನಗಂಡಿದ್ದ ಅಕ್ಕ ಆತನನ್ನು ತೋರಿಸುವಂತ ಸಚರಾಚರವನ್ನೆಲ್ಲ ಪ್ರಾಣಿ ಪಕ್ಷಿಗಳನೆಲ್ಲ ಆರ್ತಳಾಗಿ ಕೇಳುವ ದೃಶ್ಯ ಕಣ್ಮುಂದೆ ನಿಲ್ಲುತ್ತದೆ. ಆ ವಚನವು ಹೀಗಿದೆ.

ಚಿಲಿಪಿಲಿ ಎಂದೋದುವ ಗಿಳಿಗಳಿರಾ  
ನೀವು ಕಾಣಿರೆ, ನೀವು ಕಾಣಿರೇ ;  
ಸರವೆತ್ತಿ ಪಾಡುವ ಕೋಗಿಲೆಗಳಿರಾ,  
ನೀವು ಕಾಣಿರೆ, ನೀವು ಕಾಣಿರೇ !  
ಎರಗಿಬಂದಾಡುವ ತುಂಬಿಗಳಿಗಾ,  
ನೀವು ಕಾಣಿರೆ ನೀವು ಕಾಣಿರೇ ;  
ಕೊಳನ ತಡಿಯೊಳಾಡುವ ಹಂಸಗಳಿರಾ,  
ನೀವು ಕಾಣಿರೆ ನೀವು ಕಾಣಿರೇ !  
ಹ್ವಗಿರಿ ಗಹ್ವರದೊಳಗಾಡುವ ನವಿಲುಗಳಿರಾ,  
ನೀವು ಕಾಣಿರೆ, ನೀವು ಕಾಣಿರೇ,  
ಚನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ಹೇಳಿರೆ,

*ಅಕ್ಕನ ವ. ೧೭೪ ಪು. ೫೫*

ಈ ವಚನವನ್ನು ಅಧ್ಯಯನ ಮಾಡುವಾಗ ಅಕ್ಕಮಹಾದೇವಿಯ ಜೀವನ ವಿವರಗಳು ಪ್ರಸ್ತಾಪವಾಗುತ್ತವೆ. ಉಡುತಡಿಯಿಂದ ಕಲ್ಯಾಣಕ್ಕೆ ನಡೆವಾಗ ಅಥವಾ ಕಲ್ಯಾಣದಿಂದ ಅವಳು ಕದಳಿಗೆ ನಿರ್ಗಮಿಸುವಾಗ 'ಚನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುವ ಪ್ರಸಂಗದ *೧. ಎಂ.*

*ಚಿಂದಾನಂದ ಮೂರ್ತಿ – ವಚನ ಸಾಹಿತ್ಯ ೧೯೭೫ ಪು. ೧೫೬.*

ಸಂದರ್ಭವೊಂದು ಈ ವಚನದಲ್ಲಿ ಅಭಿವ್ಯಕ್ತಗೊಂಡಿದೆ. ಇದು ಒಂದರ್ಥದಲ್ಲಿ ಕಳೆದು ಹೋದ 'ವಸ್ತು'ವನ್ನು ಕಂಡಿರುವಿರೇನು? ಎಂದು ಎದುರಿಗೆ ಬರುವ ಎಲ್ಲರಿಗೂ, ಕೇಳುವ ತಾಯಿಯ ರೀತಿಯನ್ನು ಇದು ಹೋಲುತ್ತದೆ. ತಾಯಿ ಓರ್ವಳು ತನ್ನ ಮಗುವಿಗಾಗಿ ಹುಡುಕುವ ರೀತಿಯ ಭಾವ ಇಲ್ಲಿ ಪ್ರಕಟಗೊಂಡಿದೆ. ಇಲ್ಲಿ 'ಅಕ್ಕ' ಮಹಾದೇವಿ ಆಗಿ ತನ್ನ ಎದುರಿಗೆ ಬರುವ ಪ್ರಕೃತಿಯಲ್ಲಿಯೇ ಪಕ್ಷಿ ಸಂಕುಲವನ್ನು ಮಾತನಾಡಿಸುತ್ತಾಳೆ. ಗಿಳಿ, ಕೋಗಿಲೆ, ದುಂಬಿ ಹಂಸೆ, ನವಿಲುಗಳನ್ನು ಆತ್ಮೀಯವಾಗಿ ಕಾಣುತ್ತ ಅವುಗಳೊಂದಿಗೆ, ತನ್ನ ಭಾವವನ್ನು ಹಂಚಿಕೊಳ್ಳುತ್ತಾಳೆ. ಮಾತನಾಡುವದೇ 'ಬಹುದೊಡ್ಡಗುಣವೆಂದುಕೊಂಡ ಮಾನವ ಸಂಪರ್ಕದಿಂದ ಹೊರನಡೆದು ಪ್ರಕೃತಿಯ ಮಧ್ಯದಲ್ಲಿ ನಡೆದು ಬರುವಾಗ 'ಮಾತು ಕೇಳುವ' ಜೀವ ಸಂಕುಲದೊಂದಿಗೆ ಅವಳು ಮಾತಿಗಿಳಿಯುವುದು ವಿಶಿಷ್ಟವೆನಿಸುತ್ತದೆ. [೨] ಆ ಪಕಿಗಳಿಗೆಲ್ಲಾ ಚೆನ್ನಮಲ್ಲಿಕಾರ್ಜುನನ್ನು 'ನೀವು ಕಾಣಿರೆ' ನೀವು ಕಾಣಿರೆ' ಎಂದು ಕೇಳುತ್ತ. ಆತುರ ಪಡುತ್ತ ಆತನನ್ನು ಹುಡುಕುತ್ತ ಹೋಗುವ ರೀತಿ ಆಕೆಯ ಆತುರದಷ್ಟೇ ತೀವ್ರತೆಯನ್ನುಂಟುಮಾಡುತ್ತದೆ ತನ್ನ ಪ್ರೇಮಿಯಾದ ಆ ಪರಮಾತ್ಮನು ಪ್ರಕೃತಿಯ ಮಧ್ಯದಲ್ಲಿ ಕಾಣದಂತೆ ಇರುವುದನ್ನು ಈ ವಚನವು ಎತ್ತಿ ತೋರಿಸುವಂತಿತ್ತು.

ಆ ದೇವನ ಮೇಲಿನ ಅಕ್ಕನ ಅನುರಾಗವನ್ನು 'ಪ್ರಕೃತಿಯ ಮೇಲಿನ ಪ್ರೇಮವನ್ನಾಗಿ ರೂಪಗೊಳಿಸಲಾಗಿದೆ. ಈ ವಚನದ ಪ್ರತಿ ಸಾಲಿನ ಕೊನೆಯಲ್ಲಿ ಹೆಸರಿಸುವ ಗಿಳಿ, ಕೋಗಿಲೆ, ದುಂಬಿ, ಹಂಸೆ, ನವಿಲುಗಳ ಕ್ರೀಯಾಶೀಲತೆ ಪ್ರಕೃತಿಯ ಪರಿಸರವನ್ನು ತುಂಬಿಕೊಂಡು ನಿಂತ ರೀತಿ ಮತ್ತು ಅವು ವಾಸಿಸುವ ವಿವಿಧ ಪ್ರಕೃತಿಕ ತಾಣಗಳನ್ನು ಪರಿಭಾವಿಸುತ್ತ ಅವುಗಳ ಗುಣವಾಚಕವನ್ನು ಇಲ್ಲಿ ಅವ್ಯಕ್ತವಾಗಿ ಸೂಚಿಸಿದ್ದು, ತುಂಬಾ ವಿಶೀಷ್ಟವಾದ ಅಂಶವಾಗಿದೆ.

ಓದುವ, ಪಾಡುವ, ಎರಗಿಬಂದಾಡುವ ಕೊಳನ ತಡಿಯೊಳಗಾಡುವ, ಗಿರಿಗಹ್ವರದೊಳಾಡುವ ಪದಗಳ ಬಳಕೆಯು ಅವು ಪ್ರಕೃತಿಯ ತುಂಬಾ ವ್ಯಾಪಿಸಿರುವುದನ್ನು ತೋರುತ್ತದೆ. ಇದರೊಂದಿಗೆ ಈ ಕ್ರೀಯಾ ಪದಗಳು ಅರಣ್ಯದೊಳಗಿನ ಪಕ್ಷಿ ಸಂಕುಲಕ್ಕೆ ಮಾತ್ರ ಹೇಳಿದ ಮಾತೆನಿಸದೆ ವ್ಯರ್ಥ ವಿದ್ಯಕಲಿತು ಜನರನ್ನು ವಂಚಿಸುವವರನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳಿದಂತೆ ಪಾಠಗಳನ್ನು ಓದಿದ ಪಂಡಿತ ಗಿಳಿಗಳು 'ರಾಗ' ಬದ್ಧ ಕೀರ್ತನ ಕಾರಿ ಕೋಗಿಲೆಗಳು, ನಾತ ಕಂಡಲೆಲ್ಲ ತಿರುಗುವ ಸಾಧಕ ದುಂಬಿಗಳು, ಆಳಕ್ಕಿಳಿಯದ ಸುಲಭ ಹಂಸರು, ಪ್ರದರ್ಶನ ಕಲೆಯ 'ನವಿಲು' ನಾಟ್ಯ ಮಣಿಗಳು ಮುಂತಾದ ಡಾಂಬಿಕ ಭಕ್ತರ ಸಮೂಹವನ್ನು ಕುರಿತು ಮಾಡಿರುವ ವ್ಯಂಗ್ಯತನದ ಮೊನಚು ಈ ವಚನದಲ್ಲಿ ಕಾಣಸಿಗುತ್ತವೆ. ಅಂತರಂಗವನ್ನು ಹೊಕ್ಕಲ್ಲದೆ ತಮ್ಮನ್ನು ತಾವು ತಿಳಿದುಕೊಳ್ಳದೆ, ಕೇವಲ ಬಾಹ್ಯಾಚರಣೆಯಿಂದ ಆ ದೇವನನ್ನು ಕಾಣಲು ಸಾಧ್ಯವಿಲ್ಲವೆಂದು ಹೇಳುತ್ತಿರುವಂತೆ ಅಕ್ಕ ನೀವು ಕಾಣಿರೆ? ನೀವು ಕಾಣಿರೆ? ಎಂದಿರುವಂತಿದೆ.

*೨) ಡಾ॥ ಈಶ್ವರಯ್ಯಾ ಮಠ-ಅಕ್ಕನ ವಚನವೊಂದರ ಬೆನ್ನುಹತ್ತಿ ಕಲ್ಯಾಣ ಪಂಥೆ ಪು. ೪೮*

ಅನುಭಾವಿಕ ನೆಲೆಯಲ್ಲಿ ಜೀವನವನ್ನು 'ಪಂಚ ಪ್ರಾಣಿ' ಎಂದು ಕರೆಯಲಾಗುತ್ತದೆ. 'ಪ್ರಾಣ ಪಕ್ಷಿ' ಎಂದು ಕೆಲವರು ಅದನ್ನು ಗುರುತಿಸುತ್ತಾರೆ. ಹೀಗಾಗಿ ಈ ಐದು ಪಕ್ಷಿ ಸಂಕುಲವನ್ನು ಮನುಷ್ಯನು ಒಳಗೆ ಕಾಣಬೇಕೆನ್ನುವ ಐದು ಪ್ರತ್ಯೇಕ ಗುಣಗಳಿಗೆ ಪ್ರತೀಕವಾಗಿಯೂ ಬಳಸುತ್ತಾರೆ. ಅಂದರೆ ವಿವೇಚನೆ ಇಲ್ಲದ ಭಕ್ತಿ ಕೇವಲ ಕೀರ್ತಿ ಭಕ್ತಿ, ಭೋಗಲಾಲಸೆಯುಳ್ಳ ಭಕ್ತಿ ತೋರಿಕೆಯ ಭಕ್ತಿ, ನಟನಾ ಭಕ್ತಿಯಿಂದ ಆ ಪರಶಿವನನ್ನು ಕಾಣಲು ಹೇಗೆ ಸಾಧ್ಯ? ಎಂಬುದನ್ನು ಈ ವಚನ ತೋರುತ್ತಿರುವಂತಿದೆ. ಪ್ರಸ್ತುತವಾದ ಈ 'ಪಕ್ಷಿ ಪ್ರತೀಕವುಳ್ಳ ವಚನವನ್ನು ಪರಿಭಾವಿಸಿದಷ್ಟು ಅರ್ಥವ್ಯಾಪ್ತಿಯನ್ನು ಧ್ವನಿಸುತ್ತದೆ ಎನ್ನಬಹುದು.

ಅಳಿಸಂಕುಲವೆ, ಮಾಮರವೆ, ಬೆಳದಿಂಗಳೆ ಕೋಗಿಲೆಯೇ
ನಿಮ್ಮನೆಲ್ಲರನೂ ಒಂದ ಬೇಡುವೆನು
ಎನ್ನೊಡೆಯ ಚನ್ನ ಮಲ್ಲಿಕಾರ್ಜುನ ದೇವರ ಕಂಡಡೆ
ಕರೆದು ತೋರಿರೆ,

*ಅಕ್ಕನ ವ. ೪೩ ಪು. ೧೭*

ಎಂಬ ಇನ್ನೊಂದು ವಚನದಲ್ಲಿ ಈ ಹಿಂದಿನ ಐದು ಪಕ್ಷಿಗಳೊಂದಿಗೆ ಇಲ್ಲಿ 'ಮಾಮರ' ಹಾಗೂ ಬೆಳದಿಂಗಳನ್ನು ಬೇಡುತ್ತಾಳೆ. ನೀವು ಆದೇವರನ್ನು ನೋಡಿದ್ದರೆ ತೋರಿಸಿರಿ ಎಂದು ನಿವೇದಿಸಿಕೊಳ್ಳುವ ಪರಿ ಇಲ್ಲಿ ಆತ್ಮೀಯವಾಗುತ್ತದೆ. ಇಲ್ಲಿ ಉಲ್ಲೇಖಿಸಲಾಗಿರುವ ಈ ಅಳಿಸಂಕುಲ, ಮಾಮರ, ಬೆಳದಿಂಗಳು, ಮತ್ತು ಕೋಗಿಲೆಯ ಸಂದರ್ಭಗಳು ವಸಂತ ಮಾಸದ ಹುಣ್ಣಿಮೆಯ ರಾತ್ರಿಯ ಸಂಕೇತವಾಗಿರುವಂತಾಗಿದೆ. ಆ ಮಲ್ಲಿಕಾಜುನನ ವಿರಹದಲ್ಲಿ ಬೇಯುತ್ತಿರುವ ಅಕ್ಕನು ಆ ಸಂದರ್ಭದ ಸನ್ನಿವೇಶವನ್ನು ವಿವರಿಸಿರುವಂತಿದೆ. ಸಮಸ್ತ ವಿಶ್ವ ಪ್ರಕೃತಿಯಲ್ಲಿ ಸರ್ವಭರಿತನಾಗಿರುವ ಅವ್ಯಕ್ತ ಪರತತ್ವದ ಅರಿವು ಮತ್ತು ಅನುಸಂಧಾನದ ಬಯಕೆಯೇ ಇಲ್ಲಿ ವ್ಯಕ್ತವಾಗಿರುವುದನ್ನು ಅರಿಯಬಹುದಾಗಿದೆ. ಸಕಲಜೀವರಾಶಿಗಳಲ್ಲಿ ಅಂತರ್ ಸಹಿತವಾಗಿರುವ ಶಿವತತ್ವವು ಸಚರಾಚರ ಸೃಷ್ಟಿಯಲ್ಲಿಯೂ ಅಂತರ್ಗತವಾಗಿದೆ. 'ಪ್ರಕೃತಿ–ಪರಮಾತ್ಮನ ಸಂಬಂಧವು ಶಿವ–ಜೀವ ಸಂಬಂಧದಂತೆಯೇ ಅನಾಧಿ ಶಾಶ್ವತ ಎನ್ನುವ ನಂಬಿಕೆ ಅನುಭಾವಿ ಅಕ್ಕನಲ್ಲಿ ಗಾಡವಾಗಿದೆ. [೩] ಇಲ್ಲಿ ಅಕ್ಕನ ಕಾವ್ಯದ ಕೇಂದ್ರ ಬಿಂದು ಚೆನ್ನಮಲ್ಲಿಕಾರ್ಜುನ ಆಕೆಯ ವಚನಗಳ ತುಂಬೆಲ್ಲ ಆತನದೇ ಬಗೆ ಬಗೆಯ ಚಿತ್ರವಿದೆ. ಆತನನ್ನು ಕುರಿತೇ ಹಲವು ಬಗೆಯ ಕರೆಗಳು ಬೆಡಿಕೆಗಳು ಇವೆ. ಚನ್ನಮಲ್ಲಿಕಾರ್ಜುನ ಆಕೆಯ ವಚನಗಳ ನಿರ್ಜೀವ ಅಂಕಿತವಲ್ಲ. ಅದು ಅವಳ ಜೀವಕೇಂದ್ರ ಆತನನ್ನು ಸಾಕಾರವಾಗಿಯೂ ನಿರಾಕಾರವಾಗಿಯೂ ಬಣ್ಣಿಸುತ್ತಾಳೆ. ಆ ಪಾರಮಾರ್ಥಿಕ ಪತಿಯ ಭೌತಿಕ ಉಪಸ್ಥಿತಿಗೆ ಅಕ್ಕ ಹಂಬಲಿಸುತ್ತಾಳೆ. ಆ

*೩. ಡಾ. ಶಾಂತಾ ಇಮ್ರಾಪೂರಂ ಉಡುತಡಿ ಮಹಾದೇವಿಯಕ್ಕ ಪು. ೭೧*

ಸಂದರ್ಭದ ಆಕೆಯ ಮೂರ್ತಶಷ್ಟು ಚಿತ್ರಗಳು ಆತನನ್ನು ಭಾವಗಮ್ಯವಾಗಿಸುತ್ತವೆ. 'ಹಿಡಿವೆನೊಂದೊಡೆ ಓಡಿಗೆ ಜಾರನವ್ವ, ತಡೆವೆನೆಂದಡೆ ಮೀರಿ ಹೋದನವ್ವ' ಎಂದು ಹೇಳುತ್ತ ತಾನು ಅವನನ್ನು ಹಿಡಿಯುಲ್ಲಿ ವಿಫಲಳಾಗಿರುವುದನ್ನು ತಿಳಿಸುತ್ತಾಳೆ. ಆದರೂ ಆತನನ್ನೆ ಮನಸಾರೆ ಮೆಚ್ಚಿ, ಅವನಿಗಾಗಿ ಕಾಯುತ್ತ ಕುಳಿತುಕೊಳ್ಳುತ್ತಾಳೆ ಅವನನ್ನಲ್ಲದೇ ತನ್ನ ಮನ ಅನ್ಯಕ್ಕೆಳಸದೆ ಇರುವುದನ್ನು ಅಕ್ಕನ ಒಂದು ವಚನ ಹೀಗೆ ಹೇಳುತ್ತದೆ.

> 'ಗಿರಿಯಲ್ಲಲ್ಲದೆ ಹುಲ್ಲು ಮೊರಡಿಲ್ಲಾಡುವುದೇ ನವಿಲು?
> ಕೊಳಕ್ಕಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸ?
> ಮಾಮರ ತಳಿತಲ್ಲದೆ ಸರಗೈಯದೆ ಕೋಗಿಲೆ?
> ಪರಿಮಳ ವಿಲ್ಲದ ಪುಷ್ಪ ಕ್ಕೆಳಸುವದೆ ಭ್ರಮರ?
> ಎನ್ನ ದೇವ ಚನ್ನಮಲ್ಲಿಕಾರ್ಜುನಲಿಗಲ್ಲದೆ
> ಅನ್ಯಕ್ಕೆಳಸುವುದೆ ಎನ್ನ ಮನ?
> ಪೇಳಿರೆ ಕೆಳದಿಯರಿರಾ !

*ಶಿ.ಶ. ವಚನ ಸಂ ೨೧೧ ಪು.ಸಂ. ೬೪*

ಈ ವಚನ ಅಕ್ಕ ಚೆನ್ನ ಮಲ್ಲಿಕಾರ್ಜುನನಿಗಾಗಿ ದೃಢ ನಿರ್ಧಾರ ಕೈಕೊಂಡಿರುವ ಸಂಗತಿಯನ್ನು ತಿಳಿಸುತ್ತದೆ. ಆತನಿಗಾಗಿ ಅಸಂಖ್ಯಾ ಕಷ್ಟಗಳನ್ನೆದುರಿಸಲೂ ಆಕೆ ಸಿದ್ದಳು, 'ಕಿಡಿಕಿಡಿ ಕೆದರಿದರೆ ಎನಗೆ ಹಸಿವು ತೃಷೆ ಅಡಗಿತ್ತೆಂಬೆನು, ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದ ರೆಂಬೆನು ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು, ಶಿರ ಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು [೪] ಎಂದು ಹೇಳುವ ಅಕ್ಕ ಎಂದೆಂದೂ ಆತನಿಗಲ್ಲದೆ ಅನ್ಯದೈವಕ್ಕೆಳಸುವುದಿಲ್ಲವೆಂದು ಇಲ್ಲಿ ಸ್ಪಷ್ಟಪಡಿಸುತ್ತಾಳೆ. ಏಕದೇವೋಪಾಸನೆಯ ಶರಣ ತತ್ವ ಪ್ರತಿಪಾದನೆಯನ್ನು ನಾವಿಲ್ಲಿ ಗುರುತಿಸಬಹುದಾದರೂ ಅದರ ನಿರೂಪಣೆಯಲ್ಲಿ ಬಳಸಲಾಗಿರುವ ಪಕ್ಷಿ ಪ್ರಪಂಚದ ಸಂಸ್ಕೃತಿ ಮನ ಮೆಚ್ಚುವಂತಿದೆ 'ಗಿರಿಯನ್ನುಳಿದು ಹೇಗೆ ನವಿಲು ಹುಲ್ಲುಮೊರಡಿಯಲ್ಲಾಡುವುದಿಲ್ಲವೋ, ಕೊಳವಲ್ಲದೆ ಹಂಸಪಕ್ಷಿ 'ಹಳ್ಳಕ್ಕೆ ಹೇಗೆ ಎಳಸುವದಿಲ್ಲವೊ, ಮಾವು ಚಿಗುರುವುದರ ಸಮಯ ಬಿಟ್ಟು ಹೇಗೆ ಕೋಗಿಲೆ ಹಾಡುವದಿಲ್ಲವೋ ಹಾಗೆ ಚೆನ್ನ ಮಲ್ಲಿಕಾರ್ಜುನಂಗಲ್ಲದೆ ಅನ್ಯ ದೈವಕ್ಕೆ ತನ್ನ ಮನ ಎಳಸದು ಎಂಬುದನ್ನು ಸೋಗಸಾದ ದೃಷ್ಟಾಂತಗಳೊಂದಿಗೆ ಹೇಳಿರುವುದನ್ನಿಲ್ಲಿ ಕಾಣಬಹುದು.

ಅಕನ ಪಕ್ಷಿ ದೃಷ್ಟಾಂತ ಉಪಮಾನದ ವಚನಗಳಲ್ಲಿ ಅವಳ ಅಂತರಂಗದ ಪ್ರಮಾಣಿಕ ಪ್ರತಿಬಿಂಬವಿದೆ ಈ ಬಗೆಯ ಆತ್ಮ ನಿವೇದನೆ, ಆತ್ಮ ನಿರೀಕ್ಷಣೆ ಹಾಗೂ ಆತ್ಮ ವಿಮರ್ಶೆಗಳು ಇಂಥ ವಚನಗಳಲ್ಲಿ ಅಭಿವ್ಯಕ್ತವಾಗಿರುವ ರೀತಿ ಆಕರ್ಷಕವಾಗಿರುತ್ತದೆ. ತನ್ನ ಪ್ರತಿಯ ಸಾಮಿಪ್ಯಕ್ಕಾಗಿ ಹಾತೊರೆಯುವ ಪರಿಯಂತೂ ಇಲ್ಲಿ ಅನನ್ಯವಾಗಿ ಚಿತ್ರಿತವಾಗುತ್ತದೆ.

*೪. ಅಕ್ಕನ ವಚನ ೧೪೦ ಪು. ೪೪*

ಪಂಚೇಂದ್ರಿಯದ ಉರವಣೆಯ
ಉದಮದದ್ ಭರದ ಜವ್ವನದೊಡಲು ವೃಥಾ ಹೊಯಿತ್ತಲ್ಲಾ?
ತುಂಬಿ ಪರಿಮಳವಕೊಂಡು ಬಿಂಬಿಸುವ ತೆರನಂತೆ ಇನ್ನೆಂದಿಗೆ
ಒಳಕೊಂಬೆಯೊ ಅಯ್ಯಾ ಚೆನ್ನಮಲ್ಲಿಕಾರ್ಜುನಾ

*ಅಕ್ಕನ ವ. ೨೨೪ ಪು. ೭೦*

ಚನ್ನಮಲ್ಲಿಕಾರ್ಜುನನ್ನು ತನ್ನ ಪತಿಯೆಂದು ನಿಶ್ಚಯಿಸಿ ಆತನೊಂದಿಗಿನ ಸಮಾಗಮವನ್ನು ತನ್ನ ಅಂತಿಮ ಗುರಿಯಾಗಿಟ್ಟುಕೊಂಡು ಅಕ್ಕನ ಈ ವಚನದಲ್ಲಿ ಮಾನವ ಪ್ರೇಮ ದೈವತ್ವದ ಕಡೆಗೆ ತನ್ನೆಲ್ಲ ಉತ್ಕಟತೆಯೊಂದಿಗೆ ತಿರುಗಿರುವುದನ್ನು ಕಾಣಬಹುದು. ಅಕ್ಕ ಇಲ್ಲಿ ಕಲ್ಪಿಸಿಕೊಳ್ಳುವ ಆಕೆಯ ಮತ್ತು ಚೆನ್ನಮಲ್ಲಿಕಾರ್ಜುನನ ಸ್ನೇಹ ಸ್ವರೂಪವು ತೋರಿಕೆಯಲ್ಲಿ ಲೌಕಿಕ ಪ್ರಣಯಿಗಳ ಸ್ನೇಹದಂತೆ ಇದ್ದರೂ ಅನುಭಾವಿಕ ಸ್ಥರದಲ್ಲಿ ಅದು ಅಭಿನ್ನವಾಗಿಯೂ ಭಿನ್ನವಾಗಿಯೂ ಇದೆ.

ಹೀಗೆ ಅನುಭಾವಿಕ ಅನುಭವದೊಂದನ್ನು ಲೈಂಗಿಕಾನುಭವದ ಮೂರ್ತ ರೂಪದಲ್ಲಿ ಪ್ರಕಟಪಡಿಸಬೇಕಾದ್ದರಿಂದ ಆಕೆಯ ವಚನಗಳ ಪ್ರತಿಮಾ ವಿಧಾನ (ತುಂಬಿ ಪರಿಮಳವನೆಕೊಂಡು ಲಂಬಿಸುವ ತೆರನಂತೆ ಎಂಬ ಲೈಂಗಿಕ ಸತ್ವದಿಂದಲೇ ಕೂಡಿದೆ ಎಂಬುದನ್ನು ಈಗಾಗಲೇ ವಿಮರ್ಶಕರು ಗುರುತಿಸಿದ್ದಾರೆ [೫]

ಸ್ವತಃ ಹೆಣ್ಣಾದ ಅಕ್ಕ, ಪ್ರೇಮಿಸುವ ಹೆಣ್ಣಿನ ತೀವ್ರ ಉತ್ಕಟತೆಯೊಂದಿಗೆ ಮಲ್ಲಿಕಾರ್ಜುನನನ್ನು ಕಾಣಲು ಬಯಸುವದರಿಂದ ಆಕೆಯ ಸತಿ-ಪತಿ ಭಾವದ ಇಂಥ ವಚನಗಳಿಗೆ ಒಂದು ವಿಶಿಷ್ಟ ಶಕ್ತಿ ಮೂಡುತ್ತದೆ ಎನ್ನಬಹುದು.

ವಿರಹದ ಇಂಥ ಉತ್ಕಟಾವಸ್ಥೆಯನ್ನು ಬಿಂಬಿಸುವ ಇನ್ನೊಂದು ವಚನ ದುಂಬಿ' ದೃಷ್ಟಾಂತದ್ದು

ಕೀಡೆ ತುಂಬಿಯ ಹಂಬಲದಿಂದ ತುಂಬಿಯಾಗಿ
ತನ್ನ ಬಿಡಲುಂಟೆ ಅಯ್ಯಾ?
ಆನು ನಿಮ್ಮ ನೆನೆದು
ಎನ್ನ ಕರ ತುಂಬಿ ಎನ್ನ ಮನ ತುಂಬಿ ಎನ್ನಭಾವತುಂಬಿ
ಮತ್ತಿಲ್ಲದೆ ನಿನ್ನ ಕೂಟದ ಸವಿಗಲೆಯನಿಂತು
ಕಾಣುವೆನಯ್ಯಾ ಚೆನ್ನಮಲ್ಲಿಕಾರ್ಜುನಾ?

ಅಕ್ಕನ ವಚನ ೧೩೮ ಪು.೫೮

ಈ ವಚನ ಹಿಂದಿನ ವಚನದ ಭಾವನೆಯನ್ನು ಇನ್ನಷ್ಟು ತೀವ್ರ ತರವಾಗಿ ನಿವೇದಿಸುತ್ತದೆ. ತಾನೊಲಿದ ಚೆನ್ನಮಲಿಕಾರ್ಜುನ ತನಗೆ ಕರಗಿಸುವ ಕಾಲವನ್ನು ಕಾತರಿಸಿ ಕಾಯುವ ಉತ್ಕಟ ವಿರಹದ ತೀವ್ರತೆಯನ್ನು ಇದು ಸೂಕ್ತವಾಗಿ ಅಭಿವ್ಯಕ್ತಿಸಿದೆ. ಈ

*೫. ಕನ್ನಡ ಸಾಹಿತ್ಯ ಚರಿತ್ರೆ-ಮೈ.ವಿ.ವಿ.ಸಂ.೪ ೧೯೭೭ ಪು. ೪೯೫*

ದೆಸೆಯಲ್ಲಿ ಅಕ್ಕನ ವಚನಗಳು ಆಕೆಯ ಸಮಕಾಲೀನ ವಚನಕಾರರ ವಚನಗಳಿಗಿಂತ ತುಂಬಾ ತೀಕ್ಷ್ಣವಾದವುಗಳೆನ್ನಬಹುದು. ಅನುಭಾವಿಕ ಸಂಬಂಧ ಹಾಗೂ ಅನುಭವದ "ಎಲ್ಲ ಮೆಟ್ಟಿಲುಗಳನ್ನು ಅಕ್ಕ ಲೌಕಿಕ ಪ್ರಣಯದ ಎಲ್ಲ ಮೆಟ್ಟಿಲುಗಳ ಸಮಾನ ಪ್ರತಿಮೆಗಳ ಮೂಲಕ-(ಎನ್ನ ಕರತುಂಬಿ, ಎನ್ನಮನ ತುಂಬಿ, ಎನ್ನ ಭಾವ ತುಂಬಿ) ಎನ್ನುವ ಮೂಲಕ ಚಿತ್ರಿಸುತ್ತಾಳೆ. ಇಲ್ಲಿ 'ತುಂಬಿ'ಯು ಶ್ಲೇಷಧನದಲ್ಲಿ ಬಳಕೆಯಾಗಿರುವುದರಿಂದ ಅರ್ಥವಿಸ್ತಾರತೆಯು ಅಮೋಘವಾಗಿ ನಿಲ್ಲುವುದೂ ಉಂಟು.

ಅಕ್ಕನ ವೈರಾಗ್ಯ ಪರವಾದ ಮನಸ್ಸು, ಸಾಂಸಾರಿಕ ಆಕರ್ಷಣೆಯಂದ ಬಳಲುತ್ತ ಅದರಲ್ಲಿ ಸಿಕ್ಕು ಮಾನಸಿಕ ಘರ್ಷಣೆಗೊಳಗಾಗಿದ್ದ ಚಿತ್ರ ಹಾಗೂ ಅದರಿಂದ ಬಿಡುಗಡೆ ಹೊಂದಲು ಅವಳು ಆದೇವನಲ್ಲಿ ಆತ್ಮ ನಿವೇದನೆ ಮಾಡಿಕೊಂಡಿರುವ ಪರಿಯನ್ನು ಅಕ್ಕನ ಮತ್ತೊಂದು 'ಪಕ್ಷಿ ಸಂಸ್ಕೃತಿಯ' ವಚನ ನಿರೂಪಿಸುತ್ತದೆ.

'ಕಾಯದ ಕೆಳವಳವ ಕೆಡಸಿ ಮನದ ಮಾಯೆಯ ಮಾಣಿಸಿ
ಎನ್ನ ಹರಣವ ಮೇಲೆತ್ತಿ ಸಲುಹಿದೆಯಯ್ಯಾ
ಶಿವ ಶಿವಾ ಎನ್ನ ಭವಬಂಧನವ ಬಿಡಿಸಿ
ನಿಮತ್ತ ತೋರಿದ ಘನವನು ಪಮಿಸಬಾರದಯ್ಯಾ
ಇರುಳೋಸರಿಸಿದ ಜಕ್ಕವಕ್ಕಿಯಂತೆ
ನಾನಿಂದು ನಿಮ್ಮ ಶ್ರೀಪಾದವ ನಿಂಬುಗೊಂಡು
ಸುಖದೊಳೋಲಾಡುವೆನಯ್ಯಾ

*ಅಕ್ಕನ ವ. ೧೩೪ ಪು. ೪೩*

ಕಾಯ, ಜೀವ, ಭಾವ, ಮನೆಗಳೆಲ್ಲ ಚೆನ್ನಮಲ್ಲಿಕಾರ್ಜುನನಿಗೆ ಸಮರ್ಪಿಸಿದ ಮಹಾದೇವಿ ಅಕ್ಕ ಆತನ ಒಲುಮೆಗಾಗಿ ಪಟ್ಟಪಾಡು ನಿರತಿಶಯವಾಗಿದೆ. ಮಾರಿಗೆ ಮೀರಿದ ಅವಳ ಕಾಯದ ಕಳವಳ ಮನದ ಭ್ರಮೆ, ಅಂತರಂಗದ ಬೆಗೆ, ನೊಂದ ನೋವು ಅನುಭವ ಗಮ್ಯವಾದ್ದರಿಂದ ಅದು ಲೌಕಿಕರ ಅರಿವಿಗೆ ಅಸಾಧ್ಯವೆನಿಸಿದೆ. ಆದರೂ ಅವುಗಳನ್ನೆಲ್ಲ ಕೆಡಿಸಿ, ಮಾಣಿಸಿ, ನನ್ನ ಪ್ರಾಣ ಉಳಿಸಿದಿ ಎಂದು ಹೇಳುತ್ತ ಆ ಭವಬಂಧನವ ಬಿಡಿಸುವ ನಿಮಿತ್ತ ದಾರಿತೋರಿದ ಶರಣರ ಘನತೆಯನ್ನು ಅವಳು ಯಾವುದಕ್ಕೂ ಉಪಮಿಸಲು ಆಗುವದಿಲ್ಲ ಇರುಳಲ್ಲಿ ಅಗಲಿದ 'ಜಕ್ಕವಕ್ಕಿ'ಯಂತೆ ನಾನಿಂದು ನಿಮ್ಮೊಂದಿಗೆ ಸೇರಿ ಸುಖಗೊಂಡಿದ್ದೇನೆಂದು ಹೇಳುವಲ್ಲಿ "ಜಕ್ಕವಕ್ಕಿ"ಯ ಉಪಮೆಯನ್ನು ತನ್ನ ಅನುಭಾವದ ನಿರೂಪಣೆಗಾಗಿ ಅರ್ಥ ಪೂರ್ಣವಾಗಿ ಬಳಸಿಕೊಂಡಿರುವದನ್ನು ಕಾಣಬಹುದು.

# ಏಕೇಶ್ವರ ವಾದ

ಏಕದೇವೊಪಾಸನೆಯನ್ನು ಪ್ರದಿಪಾದಿಸುವ ಶರಣರು ನಿರೀಶ್ವರ ವಾದಿಗಳನ್ನು ಹಾಗೂ ಅದ್ವೇತಿಗಳನ್ನು ತೀವ್ರವಾಗಿ ಖಂಡಿಸುತ್ತಾರೆ. ಬಹುದೈವದೋಪಾಸನೆಯ ಮೂಲಕ ದೇವರನ್ನು ಕಾಣಲು ಅಥವಾ ವಿಶ್ವಾತ್ಮನನ್ನು ಅರಿಯಲು ಸಾಧ್ಯವಿಲ್ಲವೆನ್ನುವದು ಶರಣರ ನಂಬುಗೆ ಏಕೆಂದರೆ ಗುರಿಯನ್ನು ಮುಟ್ಟಲು ಧ್ಯೇಯ ವೊಂದೇ ಒಂದು ಇರಬೇಕು. ಏಕದೇವೋಪಸನೆ ಆ ಪ್ರಸನ್ನ ಸ್ಥಿತಿಯಲ್ಲಿರುವ ನಮ್ಮ ಮನಸ್ಸನ್ನು ಒಂದು ನಿಶ್ಚಿತ ಧ್ಯೇಯದತ್ತ ಸಾಗಲು ಅನುವು ಮಾಡಿಕೊಡುತ್ತದೆ. ಬಸವಣ್ಣ ಅದನ್ನೆ 'ದೇವನೊಬ್ಬ ನಾಮ ಹಲವು' ಎಂದು ಹೇಳಿದರು 'ಪರಮ ಪತಿವ್ರತೆಗೆ ಗಂಡನೊಬ್ಬನೆ' ಎಂದು ಹೇಳುವಾಗಿನ ಧ್ವನಿ ಎಲ್ಲವನ್ನು ತಿಳಿಯ ಹೇಳುತ್ತದೆ. ಆ ಗಂಡ ಶಿವನು ಎಂಬುದಾಗಿ ಅಕ್ಕ ಹೇಳುತ್ತಾಳೆ. ಅದನ್ನು ಅಲ್ಲಗಳೆವವರನ್ನು ಕಾಗೆಗೂಗೆಗೆ ಹೋಲಿಸುವ ಒಂದು ಪಕ್ಷಿ ಚಿತ್ರ ಅಕ್ಕನ ವಚನದಲ್ಲಿ ಹೀಗೆ ವ್ಯಕ್ತಿಗೊಂಡಿದೆ.

ಗೂಗೆ ಕಣ್ಣ ಕಾಣಲರಿಯದೆ ರವಿಯ ಬಯ್ವುದು
ಕಾಗೆ ಕಣ್ಣ ಕಾಣಲರಿಯದೆ ಶಶಿಯ ಬಯ್ವುದು
ಕುರಡ ಕಣ್ಣ ಕಾಣಲರಿಯದೆ ಕನ್ನಡಿಯ ಬಯ್ವುನು
ಇವರ ಮಾತೆಲ್ಲವು ಸಹಜವೆ
ನರಕ ಸಂಸಾರದಲ್ಲಿ ಹೊದಕುಳಿಗೊಳುತ್ತ
ಶಿವನಿಲ್ಲ, ಮುಕ್ತಿಯಿಲ್ಲ, ಹುಸಿಯೆಂದಡೆ
ನರಕದಲ್ಲಿಕ್ಕದೆ ಬಿಡುವನೆ ಚೆನ್ನಮಲ್ಲಿಕಾರ್ಜುನಯ್ಯಾ?

*ಅಕ್ಕನ ವ. ೧೬೭ ಪು. ೫೨*

ಹಲವು ತೆರನಾದ ದೈವಾರಾಧನೆಯು ೧೨ನೆಯ ಶತಮಾನದಲ್ಲಿತ್ತು. ಮೈಲಾರ, ಬೀರ, ಬೈರವ, ಧೂಳ, ಕೇತ ಈ ಹೆಸರಿನ ದೈವಗಳು ಪ್ರಸಿದ್ಧವಿದ್ದಿರಬಹುದು.[೮] ಈ ರಿತಿದೈವಾರಾದನೆಯ ಆಚರಣೆಗಳು ಪ್ರಚಲಿತವಿದ್ದುದ್ದನು ಅಂಬಿಗರ ಚೌಡಯ್ಯ ಪ್ರಸ್ತಾಪಿಸುತ್ತಾನೆ. ಈ ಸಂದರ್ಭದಲ್ಲಿ ಅನೇಕರು 'ಶಿವನು' ದೇವರಲ್ಲ ಅವನಿಲ್ಲ ಅವನಿಂದ ಮುಕ್ತಿಯಿಲ್ಲ ಎಂದು ಹೇಳುತ್ತಿದ್ದರು. ಅಂಥವರನ್ನು ಅಕ್ಕಮಹಾದೇವಿ ಹಗಲು ಸೂರ್ಯನನ್ನು ಕಾಣದ ಗೂಗೆಗೂ ರಾತ್ರಿಯ
ಚಂದ್ರನನ್ನು ಅರಿಯದ ಕಾಗೆಗೂ ಹೊಲಿಸಿ ಅವರನ್ನು ಜರಿಯುತ್ತಾಳೆ. ಅಷ್ಟೇ ಅಲ್ಲದೆ ಈ ಕಾಲದಲ್ಲಿ ಸಂಸಾರದ ಅಜ್ಞಾನದಲ್ಲಿ ಸಿಲುಕಿಕೊಂಡವರಿಗೆ ಇದರ ತಿಳುವಳಿಕೆಯಲ್ಲಿಂದ ಬರಲು ಸಾಧ್ಯ? ಅಂಥವರು ಕಷ್ಟಕ್ಕೆ ಗುರಿಯಾಗುವುದಾಗಿ ಅಕ್ಕ ಇಲ್ಲಿ ತಿಳಿಸುತ್ತಾಳೆ.

*೮) ಎಸ್. ವಿದ್ಯಾಶಂಕರ – ಶಿವಶರಣರು ಹಾಗೂ ವೈಚಾರಿಕತೆ-೧೯೯೮, ಪು.೯೨*

ತಮ್ಮ ಅಲೌಕಿಕವಾದ ಅನುಭವವನ್ನು ಅನ್ಯಹೃದಯವೇದ್ಯವಾಗುವಂತೆ ಹೇಳುವ ಶಕ್ತಿ ಅಕ್ಕಮಹಾದೇವಿಗಿದೆ. ಅದೊಂದು ಅಪೂರ್ವವಾದ ಸಿದ್ಧಿ. ಇಲ್ಲಿ ಅಕ್ಕ ವಚನಕ್ಕೆ ವಸ್ತುವನ್ನು ಪಕ್ಷಿ ಪ್ರಾಣಿ ಪ್ರಪಂಚಗಳಿಂದ ಎತ್ತಿಕೊಂಡಿದ್ದರೂ ಸಹ ಅದು ಪ್ರಕೃತಿ ಸೌಂದರ್ಯವಲ್ಲ; ಜೀವನ ಸೌಂದರ್ಯ, ಜೀವನ ಅವರ ನುಡಿಯಲ್ಲಿ ವಚನವಾಗಿದೆ ಭಕ್ತನಿಗೆ ಇರಬೇಕಾದ ಧೃಡನಿಷ್ಠೆ, ಅಹಂನಿರಸನ ಸಮರ್ಪಣಾಭಾವ ತ್ರಿವಿಧ ದಾಸೋಹಗಳ ಮಾರ್ಗದಲ್ಲಿ ಭಕ್ತಿ ಬೆಳೆಯುತ್ತದೆ. ಕೊನೆಯ ಹಂತದಲ್ಲಿ ಆ ಭಕ್ತಿಯು ಅನುಭಾವದ ನಿಲುವಿಗೆ ಬರುತ್ತದೆ. ಅಂಥ ಒಂದು ಪ್ರಸಂಗವನ್ನು ಅಕ್ಕ ಈ ವಚನದಲ್ಲಿ ಕಟ್ಟಿಕೊಡುತ್ತಾಳೆ.

ಕರುವಿನರೂಹು ಅರಗಿಳಿಯ ನೋದಿಸುವಂತೆ
ಓದಿಸುವದಕ್ಕೆ ಜೀವವಿಲ್ಲ 'ಕೇಳುವುದಕ್ಕೆ ಜ್ಞಾನವಿಲ್ಲ
ಚನ್ನ ಮಲ್ಲಿಕಾರ್ಜುನದೇವಯ್ಯಾ
ನಿಮ್ಮನರಿಯದವನ ಭಕ್ತಿ
ಕರುಹಿನರೂಹು ಆ ಅರಗಿಳಿಯ ನೋದಿಸುವಂತೆ

*ಅಕ್ಕನ ವಚನ ಸಂ. ೧೪೬ ಪು. ಸಂ. ೪೬*

ಧರ್ಮದ ವಿಚಾರದಲ್ಲಿ ಅಂಧಶ್ರದ್ಧೆಯಿಂದ ವರ್ತಿಸುತ್ತಿದ್ದವರನ್ನು ಕುರಿತು ವಿಡಂಬಿಸುವ ವಚನವಿದು. ಕರ್ಮವಾದದಲ್ಲಿದ್ದಂತೆ ಧರ್ಮದ ಹೆಸರಿನಲ್ಲಿ ನೂರಾರು ಅಂಧಶ್ರದ್ಧೆಗಳು ಮನೆ ಮಾಡಿ ಕೊಂಡಿದ್ದವು, ಜೋತಿಷ್ಯ, ಶಕುನ, ತಿಥಿ, ವಾರ, ನಕ್ಷತ್ರ ಮುಂತಾದ ಹೆಜ್ಜೆ ಹೆಜ್ಜೆಗೂ ಅಲ್ಲಿ ವಿಷಯಗಳಿಗಾಗಿ ಅಲೌಕಿಕ ಶಕ್ತಿಗಳ ಕಡೆ ಮುಖವೆತ್ತುವಂತೆ ಮಾಡುವ ಸಿಸ್ಸಾಯಕತೆ ಜನರನ್ನು ಕಾಡುತ್ತಿತ್ತು. ಸ್ವಾರ್ಥಕ್ಕಾಗಿ ಆಡಂಬರದ ಡಾಂಭಿಕ, ಆಟವಾದ 'ಕರುವಿನ ರೂಹು ತೋರಿಸುವ ಗಿಣಿಶಕುನ' ಮಾಡಿಸುವವರನ್ನು ಇಲ್ಲಿ ಎತ್ತಿ ಹೇಳುವ ಅಕ್ಕ ಅಲ್ಲಿ ಯಾವುದೂ ಇಲ್ಲ ಅದೊಂದು ಡಾಂಭಿಕ ಭಕ್ತಿ ಅದು ದೇವನ ಅರಿವಿಕೆಯಲಿ ಉಂಟಾಗುವ ಅಜ್ಞಾನವೆಂದು ಸಾರುತ್ತಾಳೆ ಇಲ್ಲಿ.

ವಚನ ಸಾಹಿತ್ಯ ಅನೇಕ ವೈಶಿಷ್ಟ್ಯಗಳಿಂದ ಕೂಡಿರುವ ಸಾಹಿತ್ಯ ಪ್ರಕಾರ. ಶಿವಮತವನ್ನು ಶಿವಶರಣರು ಈ ವಚನಗಳ ಮೂಲಕ ಕಟ್ಟಿಕೊಟ್ಟರು. ಈ ಮೂಲಕ ಅಂದಿನ ಸಮಾಜದಲ್ಲಿ ವ್ಯಕ್ತಿಯ ಪೂರ್ಣ ವಿಕಾಸಕ್ಕೆ ಪ್ರಯತ್ನಿಸಿದರು. ಜನಸಾಮಾನ್ಯರಿಗೆ ಅದರಲ್ಲೂ ಕೆಳವರ್ಗದವರಿಗೆ ಧಾರ್ಮಿಕ ಸ್ವಾತಂತ್ರ್ಯ, ಹಾಗೂ ಸಮಾನತೆಯನ್ನು ನೀಡಿ ಅವರಲ್ಲಿ ಸ್ವಾಭಿಮಾನದ ಬದುಕನ್ನು ಬಿತ್ತಿದರು. ಆ ಸಂದರ್ಭದಲ್ಲಿ ಸಮಾಜದ ಸ್ವಾಸ್ಥತೆಕಾಪಾಡಲು ಗುರು-ಜಂಗಮರನ್ನು ತಯ್ಯಾರಿಸಿದರು. ಗುರುವಿಗಿಂತ ಜಂಗಮನ ಸ್ಥಾನ, ಆ ಕಾಲದಲ್ಲಿ ತುಂಬಾ ಮಹತ್ವದೇನಿಸಿತು. 'ಚರಲಿಂಗವೆಂದು' ಆ ಜಂಗಮನನ್ನು ಕರೆಯಲಾಗುತ್ತಿತ್ತು. ಆ ಚರ ಜಂಗಮನೇ ಇನ್ನೊಂದು ಅರ್ಥದಲ್ಲಿ ಶರಣನಾಗಿದ್ದನು. ಆ ಶರಣರನ್ನು ಗೌರವಿಸುವ ಸಂಪ್ರದಾಯ ಅಲ್ಲಿ ಬಹು ಮುಖ್ಯವಾಗಿತ್ತು. ಅಂಥ ಸಂದರ್ಭದಲ್ಲಿ ಕೆಲವರು ಅವರನ್ನು ಅರಿಯುತ್ತಿರಲಿಲ್ಲವೆಂಬ ಚಿಂತನೆ ಅಕ್ಕಮಹಾದೇವಿಯಲ್ಲಿ ಕಾಣಸಿಗುತ್ತದೆ.

ಗಗನದ ಗುಂಪ ಚಂದ್ರಮ ಬಲ್ಲುದಲ್ಲದೆ
ಕಡೆಯಲಿದ್ದಾಡುವ ಹದ್ದುಬಲ್ಲುಡೆ ಅಯ್ಯಾ?
ನದಿಯ ಗುಂಪ ತಾವರೆ ಬಲ್ಲುದಲ್ಲದೆ
ಕಡೆಯಲಿದ್ದ ಹೊನ್ನಾವರಿಕೆ ಬಲ್ಲುದೆ ಅಯ್ಯಾ?
ಪುಷ್ಪದ ಪರಿಮಳವ ತುಂಬಿ ಬಲ್ಲುದಲ್ಲದೆ
ಕಡೆಯಲಿದ್ದಾಡುವ ನೊರುಜು ಬಲ್ಲದೇ ಅಯ್ಯಾ?
ಚನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣರ ನಿಲುವ ನೀವೆ ಬಲ್ಲರಲ್ಲದೆ
ಈ ಕೋಣನ ಮೈಮೆಲಣ-ಸೊಳ್ಳೆಗಳತ್ತ ಬಲ್ಲವಯ್ಯಾ

*ಅಕ್ಕನ ವ. ೧೯೪ ಪು.ಸಂ. ೫೭*

ಶರಣರ ನಿಲುವನ್ನು ಕುರಿತು ಮಾತನಾಡುವ ಈ ವಚನ ಅವರ ಮಹತ್ವತೆಯನ್ನು ಸಾದರ ಪಡಿಸುತ್ತದೆ. ಆಕಾಶದಲ್ಲಿಯ ಗುಂಪಗಳನ್ನು ಚಂದ್ರನು ಬಲ್ಲಹಾಗೆ, ಅದರ ಸಮೀಪಕ್ಕೆ ಹೋಗದ ಹದ್ದು ಅರಿಯಲು ಸಾಧ್ಯವೇ?" ಎನ್ನುವ ವಚನ ಆ ಮೂಲಕ ನದಿಯ ಗುಂಪು, ಪುಷ್ಪದ ಪರಿಮಳಗಳನ್ನು ತಾವರೆ ಮತ್ತು ದುಂಬಿಗಳು ಅರಿಯುತ್ತವೆ. ಆದರೆ ಹೊನ್ನಾವರಿಕೆ 'ನೊರಜು' ಅವುಗಳನ್ನು ಕ್ರಮವಾಗಿ ಅರಿಯಲು ಸಾಧ್ಯವಿಲ್ಲ ಹಾಗೆಯೇ ಶರಣರ ಮಹತ್ವವನ್ನು ದೇವನು ಅರಿಯನ್ನಲ್ಲದೆ ಹೀನರು ಎತ್ತ ಬಲ್ಲರೆಂಬುದು ಇಲ್ಲಿನ ವಿವರಣೆಯಾಗಿದೆ. ಈ ಮಾತನ್ನು ಕೋಣನ ಮೈಮೇಲಿನ ಸೊಳ್ಳೆ ಎಂಬ ಮಾತಿನ ಮೂಲಕ ಅತ್ಯಂತ ತೀವ್ರವಾಗಿ ಖಂಡಿಸುವುದನ್ನಿಲ್ಲಿ ಕಾಣಬಹುದು.

ಅಕ್ಕಮಹಾದೇವಿಯ ಲೋಕಾನುಭವವು ವಿಶಿಷ್ಟವಾಗಿದ್ದು, ಅವಳು ತಾನು ದೈನಂದಿನ ಬದುಕಿನಲ್ಲಿ ಗಮನಿಸಿದ ಹಲವು ವಸ್ತು, ಪ್ರಾಣಿ, ಪಕ್ಷಿಗಳನ್ನು ಮಾನವರ ಗುಣ ಸ್ವಭಾವ, ರೀತಿ ನೀತಿಗಳನ್ನು ತಿಳಿಸುವಲ್ಲಿ ತುಂಬಾ ಅರ್ಥ ಪೂರ್ಣವಾಗಿ ಬಳಸಿಕೊಂಡಿರುವುದನ್ನಿಲ್ಲಿ ಅರಿಯಬಹುದಾಗಿದೆ.

# ಸಸ್ಯ ಸಂಕುಲ

'ಪರಿಸರ' ಭೂಲೋಕದ ಮಹಾನ್ ಸಂಪತ್ತು. ಅದು ಪರಿಶುದ್ಧವಾದಷ್ಟು 'ಜೀವರಾಶಿ' ಸುಖವಾಗಿರಲು ಸಾಧ್ಯ. ಪರಿಸರ ಇಂದು ಮಲಿನವಾಗತೊಡಗಿದೆ. ಗಿಡ ಮರಗಳು ನಾಶದ ಹಾದಿಯಲ್ಲಿವೆ. ಕಾಡುಗಳನೆಲ್ಲ ಕಡಿದು ನಾಡಾಗಿಸುವುದನ್ನು ಇಂದು ಕಾಣುತ್ತಿದ್ದೇವೆ. ಹೀಗಾಗಿ ಎಲ್ಲೆಡೆ ಬಯಲೇ ಕಾಣತೊಡಗಿದೆ. ಇಂದು ಜನರಲ್ಲಿ ಪ್ರಕೃತಿ ಪ್ರೇಮವನ್ನು ಬೆಳಸುವ ನಿಟ್ಟಿನಲ್ಲಿ ಪರಿಸರ ಪ್ರಜ್ಞೆಯನ್ನು ಮಾಡಿಸುವ ಕಾರ್ಯಕ್ರಮಗಳು ಜಾರಿಯಲ್ಲಿವೆ. ಇಂದು ಪರಿಸರ ಹಾಳಾಗುತ್ತದೆ. ಅದಕ್ಕೆ ಮಾನವನು ಮಾಡುತ್ತಿರುವ ಮಾಲಿನ್ಯಗಳೇ ಕಾರಣವೆನ್ನಬಹುದು. ಆ ಮಾಲಿನ್ಯವು ಹಲವು ರೂಪದಲ್ಲಿದೆ. ಅದರಿಂದ ಪರಿಸರದಲ್ಲಿ ಅಸಮತೋಲನ ಉಂಟಾಗಿ ನಾನಾ ಅನಾಹುತಗಳನ್ನು ಜರುಗುತ್ತಿವೆ. ಭೂಮಿಯ ಮೇಲೆ ಮಾನವನ ಬದುಕು ಇಂದು ಸುಖದಾಯಕವಾಗಬೇಕಾದರೆ ನಾವು ಪರಿಸರ ಸಮತೋಲನವನ್ನು ಕಾಯ್ದುಕೊಳ್ಳುವದು ತುಂಬಾ ಅನಿವಾರ್ಯವಾಗಿದೆ.

ಈ ಬಗೆಯಲ್ಲಿ ಚಿಂತಿಸುವ ಅನೇಕ ಪರಿಸರವಾಹಿಗಳು ನಾನಾ ರೀತಿಯಲ್ಲಿ ಪ್ರಯತ್ನ ಮಾಡುತ್ತಿದ್ದಾರೆ. ಸರಕಾರವೂ ಸಹ ಈ ನಿಟ್ಟಿನಲ್ಲಿ ಸಚಿವಾಲಯವನ್ನು ಹೊಂದಿದೆ. ಸಾಹಿತಿಗಳು ಸಮಾಜಿಕ ಚಿಂತಕರು ವಿಜ್ಞಾನಿಗಳು ಅದನ್ನು ಎತ್ತಿ ಎತ್ತಿ ತೋರಿಸುತ್ತ ಈ ಪರಿಸರ ಕಾಳಜಿಯನ್ನು ವ್ಯಕ್ತಪಡಿಸುತ್ತಿದ್ದಾರೆ. ಆದರೆ ಹನ್ನೆರಡನೆಯ ಶತಮಾನದಲ್ಲಿಯೇ ಬಸವಾದಿ ಶರಣರು ಈ ನಿಟ್ಟಿನಲ್ಲಿ ಚಿಂತನೆ ನಡೆಸಿ ಮಾನವ ಬದುಕಿನಲ್ಲಿ ಪ್ರಕೃತಿ ಅದರಲ್ಲೂ ಸಸ್ಯ ಸಂಕುಲಗಳು ಎಷ್ಟು ಮಹತ್ವದ ಪಾತ್ರ ವಹಿಸುತ್ತದೆ ಎಂಬುದನ್ನು ನಿರೂಪಿಸಿದ್ದಾರೆ.

ಪರಿಸರ ರಕ್ಷಣೆಯಿಂದ ಮಾತ್ರ ಮನುಷ್ಯ ಬದುಕಬಲ್ಲನೆಂಬ ವೈಜ್ಞಾನಿಕ ಸತ್ಯವನ್ನು ಅಕ್ಕ ತನ್ನ ಅನೇಕ ವಚನಗಳ ಮೂಲಕ ತಿಳಿಸುತ್ತಾಳೆ. ಪರಿಸರ ಪ್ರಕೃತಿಯೊಂದಿಗೆ ತನ್ನ ಜೀವನಾನುಭವಗಳನ್ನು ಕಟ್ಟಿಕೊಡುವ ಅಕ್ಕ ಸಕಲ ಜೀವರಾಶಿಗಳಿಗೂ ಲೇಸನ್ನ ಬಯಸುತ್ತಾ ಅಲ್ಲಿಯ ಗಿಡ-ಮರ-ಹೂ ಬಳ್ಳಿ ಮೊದಲಾದ ಸಸ್ಯ ಸಂಸ್ಕೃತಿಯನ್ನು ಕೆಣಕುತ್ತ ಅವುಗಳ ಬಗೆಗೆ ಅಪಾರ ಪ್ರೀತಿಯನ್ನು ವ್ಯಕ್ತಪಡಿಸುತ್ತಾಳೆ. ಅಕ್ಕ ಸಸ್ಯಗಳನ್ನು ಪ್ರತಿಮೆ, ದೃಷ್ಟಾಂತ ಹಾಗೂ ಉಪಮೆಗಳನ್ನಾಗಿ ಬಳಸಿಕೊಂಡು ಮಾನವನ ಗುಣಸ್ವಭಾವಗಳಿಗೆ ಅವಳು ಕನ್ನಡಿ ಹಿಡಿಯುವ ಚಿತ್ರ ಅನುಪಮವಾಗಿದೆ. ಅಕ್ಕಮಹಾದೇವಿಯ ೩೫೪ ವಚನಗಳಲ್ಲಿ ೪೦ ವಚನಗಳು ಸಸ್ಯ ಸಂಕೇತವನ್ನು ಉಪಯೋಗಿಸಿಕೊಂಡಿವೆ. ಅಕ್ಕನ ಬಹುಪಾಲ ಜೀವನವು ಸೃಷ್ಟಿಯೊಂದಿಗೆ ಕಳೆದಿದೆ. ಅವಳು ಜನಿಸಿದ್ದು, ಮಲೆನಾಡಿನ ಉಡುತಡಿಯಲ್ಲಿ ಅಲ್ಲಿಯೇ ಬೆಳೆದು ಕಲ್ಯಾಣಕ್ಕೆ ಪ್ರಯಾಣಿಸುವಾಗ ಹಾಗೂ ಕಲ್ಯಾಣದಿಂದ ಕದಳಿಗೆ ಹೋಗುವಾಗ ಅವಳು ಹೆಚ್ಚಿನ ದಿನಗಳನ್ನು ಅರಣ್ಯದಲ್ಲಿಯೇ ಕಳೆದಿರುವ ಸಂಭವವಿದೆ. ತರುಣಿ ಮೇಲಾಗಿ ವಿರಾಗಿಣಿಯಾಗಿದ್ದ ಅಕ್ಕ ಜನರ ಸಂಘದಲ್ಲಿಗಿಂತ ಗಿಡಮರಗಳ ಸಂಪರ್ಕದಲ್ಲಿಯೇ

ಹೆಚ್ಚಾಗಿದ್ದಿರಬಹುದು. ಸಾಧ್ಯವಾದಷ್ಟು ಏಕಾಂತವಾಗಿರುತ್ತಿದ್ದ ಅವಳು ಗಿಡ, ಮರ, ಪ್ರಾಣಿ, ಪಕ್ಷಿಗಳೊಂದಿಗೆ ಗೇನೆ ಮಾತಾಡಿದ್ದಾಳೆ. ಹೀಗಾಗಿ ಅವಳ ಅನೇಕ ವಚನಗಳಲ್ಲಿ ಸಸ್ಯ ಪ್ರಪಂಚ ಬಹುಸುಂದರವಾಗಿ ಅಭಿವ್ಯಕ್ತಗೊಂಡಿದೆ ಎನ್ನಬಹುದು.

ಮನುಷ್ಯ, ಪ್ರಾಣಿ, ಪಕ್ಷಿಗಳು ಪ್ರಕೃತಿಯ ಒಂದು ಅಂಗ ಅದರ ಬೆಳವಣಿಗೆ ಮತ್ತು ವಿನಾಶದಲ್ಲಿ ಮಾನವನ ಬದುಕಿನ ಬೆಳವಣಿಗೆ ಮತ್ತು ವಿಕಾಸ ಅಡಗಿದೆ. ಇಂತಹ ಒಂದು ಸತ್ಯವನ್ನು ಹನ್ನೆರಡನೇ ಶತಮಾನದಲ್ಲಿ ಕಂಡುಕೊಂಡ ಶರಣರು ಆ ಪ್ರಕೃತಿಗೆ ಸಂಬಂಧಿಸಿದಂತೆ ಅನೇಕ ಹೊಸ ಮಜಲುಗಳನ್ನು ಪ್ರಕಟಿಸಿದ್ದಾರೆ.[೯] ಅದರಲ್ಲೂ ಅಕ್ಕಮಹಾದೇವಿಯ ವಚನಗಳಲ್ಲಿ ಸಸ್ಯ ಸಂಸ್ಕೃತಿಯ ಒಳನೋಟಗಳನ್ನು ಕಾಣಬಹುದು.

> ವನವೆಲ್ಲ ನೀನೆ, ವನದೊಳಗಣ ದೇವತರುವೆಲ್ಲಾ ನೀನೆ
> ತರುವಿನೊಳಗಾಡುವ ಖಗಮೃಗವೆಲ್ಲಾ ನೀನೆ
> ಚನ್ನಮಲ್ಲಿಕಾರ್ಜುನಾ
> ಸರ್ವಭರಿತನಾಗಿ ಎನಗೇಕೆ ಮುಖದೋರೆ

*ಅಕ್ಕನ ವ.೩೦೦ ಪು. ೯೨*

ಎನ್ನುವಲ್ಲಿ ಅಕ್ಕ ವನವನ್ನೆಲ್ಲ ದೇವ ಸ್ವರೂಪದಲ್ಲಿ ಕಾಣುತ್ತಾಳೆ ವನದ ಅಂಗ ಅಂಗವು ಪರಿಚಿತವಿರುವ ಅವಳು ಅಲ್ಲಿರುವ ಶ್ರೀಗಂಧದ ಮರ, ದೇವದಾರ ಗಿಡ, ಪಕ್ಷಿಪ್ರಾಣಿ ಸಂಕುಲವೆಲ್ಲ ಆತನೆಂದೇ ಭಾವಿಸಿ, ಅವುಗಳನ್ನು ಪ್ರೀತಿಸುತ್ತಾಳೆ ಅಲ್ಲೆಲ್ಲ ತುಂಬಿನಿಂತಿರುವ ಆ ದೇವನ ಚೈತನ್ಯವನ್ನು ಕಾಣುವ ಅಕ್ಕ ಆತನನ್ನು ಸಾಕಾರವಾಗಿ ಏಕೆ ಕಾಣುತ್ತಿಲ್ಲವೆಂದು ಪ್ರಶ್ನಿಸುತ್ತಾಳೆ.

ವನದ ತುಂಬೆಲ್ಲ ಆ ಚೆನ್ನಮಲ್ಲಿಕಾರ್ಜುನನ್ನು ಹುಡುಕಿ ಕಾಣದ ಅಕ್ಕ ಆ ಗಿಡ, ಮರ, ತರು, ಲತೆಗಳಲ್ಲೆಲ್ಲಾ ವಾಸಮಾಡುತ್ತಿರುವ ಪಕ್ಷಿ ಪ್ರಪಂಚಕ್ಕೂ ಪ್ರಶ್ನಿಸುತ್ತಾಳೆ. ಚಿಲಿಪಿಲಿ ಗುಟ್ಟುವ ಗಿಳಿ, ಸರವೆತ್ತಿ ಪಾಡುವ ಕೋಗಿಲೆ, ಎರಗಿ ಬಂದಾಡುವ ದುಂಬಿ ಕೊಳನ ತಡಿಯೊಳಾಡುವ ಹಂಸ, ಗಿರಿ ಗಹ್ವರದೊಳಗಾಡುವ ನವಿಲುಗಳನ್ನೆಲ್ಲ ಕೇಳುತ್ತ 'ನೀವು ನೋಡಿದ್ದೀರಾ ನೀವು ನೋಡಿದ್ದೀರಾ ಎನ್ನುತ್ತಾಳೆ. ಇಲ್ಲಿಯ ಪಕ್ಷಿ ಜಗತ್ತು ಸಾಂಕೇತಿಕವಾಗಿದೆ ಎನಿಸಿದರೂ ಅದರ ಹಿಂದಿರುವ ಪ್ರಶ್ನೆ, ವೇದ ಓದಿದವರನ್ನು ಹಾಡು ಹೇಳುವವರನ್ನು, ಹೂ ಪತ್ರಿಯಲ್ಲಿ ಪೂಜಿಸುವವರನ್ನು, ನೀರು ತಂದು ಮಜ್ಜನಕ್ಕೆರೆವವರನ್ನು ಗಿರಿ-ಗಹ್ವರಗಳಲ್ಲಿ ತಪಸ್ಸಿಗೆ ಕುಳಿತಿರುವವರನ್ನು ಅವಳು ಈ ಮೂಲಕ ಪ್ರಶ್ನಿಸಿರುವಂತಿದೆ 'ನೀವು ಕಾಣಿರೆ, ನೀವು ಕಾಣಿರೆ' ಎಂಬುದು ನೀವು ಕಂಡಿಲ್ಲ, ನೀವು ಕಂಡಿಲ್ಲ' ಎಂಬುದನ್ನು ಧ್ವನಿಸುತ್ತಿದೆ ಎನಿಸುವುದಿಲ್ಲವೇ? ಅಕ್ಕನ ವಚನಗಳಿಗೆ ಮೂಲ ಸಾಮಗ್ರಿ ಬಾಹ್ಯಪ್ರಪಂಚವೇ ಆದರೆ ಅದನ್ನು ನೋಡುವ ಮತ್ತು ಅದರಿಂದ ಕವಿ ಪಡೆಯುವ ಭಾವನೆಗಳ ತೀವ್ರತೆ ಮತ್ತು ಸ್ವರೂಪದ

೯) ಡಾ॥ ಬಸವರಾಜ ಸಬಂದ-ವಚನ ಚಳುವಳಿ-ಪು.೧೧೯

ಮೇಲೆ ವಚನದ ಮಹತ್ವ ಸಿದ್ಧವಾಗುತ್ತದೆ. ಬಾಹ್ಯ ಘಟನೆಗಳನ್ನು ವಸ್ತು ಸೌಂರ್ಯವನ್ನು ಈ ಕಾವ್ಯ ಪ್ರಜ್ಞೆ ಸೋಗಸಾಗಿ ಪ್ರತಿಬಿಂಬಿಸುತ್ತದೆ. ಅಥವಾ ಕೆಲವು ವೇಳೆ ಅವುಗಳನ್ನು ಅದು ವಿಮರ್ಶಿಸುತ್ತದೆ. ಈ ನೆಲೆಯಲ್ಲಿ ಗಮನಿಸಬಹುದಾದ ಅಕ್ಕನ ವಚನವಿದು. ಈಳೆ ನಿಂಬೆ ಮಾವು ಮೊದಲಕ್ಕೆ

ಹುಳಿ ನೀರನೆರೆದವರಾರಯ್ಯಾ?
ಕಬ್ಬು ಬಾಳೆ ಹಲಸು ನಾರಿವಾಳಕ್ಕೆ
ಸಿಹಿನೀರನೆರೆದವರಾರಯ್ಯಾ?
ಕಳವೆ ರಾಜಾನ್ನ, ಶಾಲ್ಯಾನ್ನಕ್ಕೆ
ಓಗರದ ಉದಕವ ನೆರೆದವರಾರಯ್ಯಾ?
ಮರುಗ ಮಲ್ಲಿಗೆ ಪಚ್ಚೆ ಮಡಿವಾಳಕ್ಕೆ
ಪರಿಮಳದುದಕವ ನೆರೆದವರಾರಯ್ಯಾ?
ಇಂತಿ ಜಾಲವು ಒಂದೆ, ನೆಲನು ಒಂದೆ, ಆಕಾಶವು ಒಂದೆ
ಆಲವು ಹಲವು ದ್ರವ್ಯಂಗಳ ಕೂಡಿ
ತನ್ನ ಪರಿ ಬೇರಾಗಿಹ ಹಾಗೆ
ಎನ್ನ ದೇಹ ಚನ್ನಮಲ್ಲಿಕಾರ್ಜುನಯ್ಯನು
ಹಲವು ಜಗಂಗಳ ಕೂಡಿಕೊಂಡಿರ್ದಡೇನು?
ತನ್ನ ಪರಿ ಬೇರೆ

*ಅಕ್ಕನ ವ.೯೯ ಪು. ೨೬*

ಪ್ರಕೃತಿಯ ನಿಗೂಢತೆ-ಅಂತಸ್ಸತ್ವ-ಪ್ರಾಮುಖ್ಯತೆ ಕುರಿತು ಅಕ್ಕಮಹಾದೇವಿ ಆದ್ಯಾತ್ಮದ ಹಿನ್ನೆಲೆಯಲ್ಲಿ ವಿವರಿಸುವ ಈ ವಚನ ತುಂಬಾ ಕುತೂಹಲಕಾರಿಯಾಗಿದೆ. ಒಂದೇ ಪ್ರಕೃತಿಯಲ್ಲಿ ಬೆಳೆದು ನಿಲ್ಲುವ ಹಣ್ಣುಗಳ ಗುಣವಿಶಿಷ್ಟತೆ, ಕಾಳಾಗಿ ಊಟಕ್ಕೆ ಸಲುವಳಿಯಾಗುವ ಕಳವೆಗಳ ರುಚಿ ವಿಶಿಷ್ಟತೆ, ಪರಿಮಳ ಬೀರಿ ಮುಡಿ ಇಡುವ ಹೂಗಳ ವೈವಿದ್ಯತೆಯನ್ನು ಅಕ್ಕ ಇಲ್ಲಿ ವಿಚಾರಿಸಿದ್ದಾಳೆ. ಇದಿಷ್ಟೇ ಆಗಿದ್ದರೆ ಈ ವಚನ ಪ್ರಾಕೃತಿಕ ಹಿನ್ನೆಲೆಯುಳ್ಳ ಒಂದು ಭಾವಗೀತೆ ಮಾತ್ರ ಆಗುತ್ತಿತ್ತು ಆದರೆ ಇಲ್ಲಿ ಅದು ಈ ಗುಣಗಳೊಂದಿಗೆ ಒಡೆದು ಕಾಣುವ ಅನೇಕ ಒಳ ಚಿತ್ರಗಳನ್ನು ಬಿಡಿಸಿ ತೋರುತ್ತದೆ.

ಈಳೆ-ನಿಂಬೆ-ಮಾವು-ಮೊದಲಗಳು ಒಂದು ಕಡೆ ಕಬ್ಬು, ಬಾಳೆ, ಹಲಸು, ನಾರಿವಾಳಗಳು ಮತ್ತೊಂದು ಕಡೆ ಮೊದಲನೆಯದಕ್ಕೆ ಹುಳಿ ನೀರನೆರೆದವರಾರು? ಎರಡನೆಯದಕ್ಕೆ ಸಿಹಿ ನೀರ ನೆರೆದವರಾರು? ಎಂದು ಪ್ರಶ್ನಿಸುವುದರೊಂದಿಗೆ ವಚನ ಆರಂಭವಾಗುತ್ತದೆ. ಇದರ ಜತೆಗೆ ಇನ್ನೆರಡು ಪ್ರಶ್ನೆಗಳು ತೊಡಕು ಹಾಕಿಕೊಳ್ಳುತ್ತವೆ. ಅನ್ನವಾಗಬಹುದಾದ ಕಳವೆಗೆ ಓಗರದ ಉದಕವನೆರೆದವರು ಮತ್ತು ಮರುಗ, ಮಲ್ಲಿಗೆಗಳಿಗೆ ಪರಿಮಳದುದಕವ ನೆರೆದವರಾರೆಂಬುದನ್ನು ನಂತರದ ಸಾಲುಗಳಲ್ಲಿ ಕೇಳಲಾಗಿದೆ. ಇಂತೀ

'ಜಲವು ಒಂದೆ, ನೆಲವು ಒಂದೆ, ಆಕಾಶವು ಒಂದೇ ಎಂದು ವಚನ ಕೊನೆಗೊಂಡಿದ್ದರೆ. ಅಲ್ಲಿ ಬರೀ ಕುತೂಹಲವನ್ನು ಕಾಣಬಹುದಾಗಿತ್ತು. ಒಂದೇ ನೆಲದಲ್ಲಿ ಹುಟ್ಟಿ, ಒಂದೇ ರೀತಿಯ ಬೆಳಕನ್ನು ಪಡೆದು, ಒಂದೇ ರೀತಿಯ ನೀರನ್ನುಂಡು ಬೆಳೆದು ನಿಂತ ಈ ಮರಗಳು ಫಲಕೊಡುವಲ್ಲೇಕೆ ಭಿನ್ನವಾಗುತ್ತವೆ? ಎಂಬ ಕುತೂಹಲ ಕೊನೆಯವರೆಗೆ ಉಳಿದು ಬಿಡಬಹುದಿತ್ತು. ಆದರೆ ಇಲ್ಲಿ ಅಕ್ಕನಿಗೆ ಈ ಕುತೂಹಲ ಹುಟ್ಟಿಸಿ ಬಿಡುವ ವಿಚಾರವಿಲ್ಲ. ಹೀಗಾಗಿ ಆ ಕುತೂಹಲಕ್ಕೆ ಕಾರಣವಾಗಿದ್ದ ಮೂಲವನ್ನು ಹಾಗೆಯೇ ಇಲ್ಲಿ ಮುಂದು ವರೆದು ತಿಳಿಸುತ್ತಾಳೆ. ಅದರೊಂದಿಗೆ ಚೆನ್ನಮಲ್ಲಿಕಾರ್ಜುನನು ಉಳಿದವರಿಗಿಂತ ಹೇಗೆ ಭಿನ್ನ ಎಂಬುದನ್ನು ತಾದಾತ್ಮಗೊಳಿಸುತ್ತಾಳೆ. ಪ್ರಕೃತಿಯ ಅಂಗವಾಗಿಯೇ ಬೆಳೆದ ಈ ಮರ ಗಿಡ ಬಳ್ಳಿಗಳು ತಮ್ಮ ಮೂಲ ದ್ರವ್ಯಂಗಳ ಗುಣವನ್ನುಳಿಸಿಕೊಂಡು ವಿಶಿಷ್ಟವಾಗಿ ಬೆಳೆದು ನಿಲ್ಲುವ ಪರಿ ಇಲ್ಲಿಯ ಒಟ್ಟು ಆಶಯವಾಗಿ ಕಾಣುತ್ತದೆ. ಇಲ್ಲಿ ಹಲವು ಜನಂಗಳ ಕೂಡಿಕೊಂಡಿದ್ದರೂ ಚನ್ನಮಲ್ಲಿಕಾಜುನನ ಪರಿಯೇ ಬೇರೆ ಎಂದು ಮುಖ್ಯವಾಗಿ ಹೇಳಬೇಕಾಗಿದೆ. ಅದಕ್ಕೆ ಅಕ್ಕ ಅದನ್ನು ಪ್ರಕೃತಿಯ ಮೂಲಕ ಕಾವ್ಯತ್ಮವಾಗಿ ಹೇಳಿರುವುದುಈ ವಚನದ ವೈಶಿಷ್ಯವಾಗಿದೆ ಎನ್ನಬಹುದು. ಇಲ್ಲಿ ಪ್ರಕೃತಿಯ ಮೂಲಕ ದ್ರವ್ಯಂಗಳು ಪ್ರಕೃತಿ ಮತ್ತು ಚೆನ್ನಮಲ್ಲಿಕಾಜುನನ ಅಮೂರ್ತವಾಗಿರುವುದನ್ನು ಈಳೆ, ನಿಂಬೆ, ಕಬ್ಬು, ಬಾಳೆ, ಶಾಲ್ಯಾನ್ನ ಮೊದಲಾದವುಗಳು ಮೂರ್ತವಾಗಿ ಇಲ್ಲಿ ಕಾಣಿಸಿಕೊಂಡಿವೆ. ಅಮೂರ್ತದ ಗುಣ ವಿಶಿಷ್ಟತೆಯನ್ನು ಮೂರ್ತ ವಸ್ತುಗಳ ಗುಣ ವಿಶಷ್ಟತೆಯೊಂದಿಗೆ ತಾದ್ಯಾತ್ಮಗೊಳಿಸಿ ವಿವರಿಸಿರುವುದೇ ಇಲ್ಲಿ ಮುಖ್ಯವಾಗುತ್ತದೆ.

ಸಸ್ಯ ಪ್ರಪಂಚದ ಮೂಲ ನೆಲೆಗಳಾದ ನೆಲ,ನೀರು, ಆಕಾಶಗಳನ್ನು ಅಕ್ಕ ಕ್ರಮವಾಗಿ ತನ್ನ ಕಾಯ-ಜೀವಕ್ಕೆ ಹೋಲಿಸಿಕೊಂಡಿದ್ದಾಳೆ. ಕಾಯವೇ ಮಣ್ಣಾಗಿ ಜೀವವೇ ಬಯಲಾದಾಗ "ಯಾವದು ಹಿಡಿಯಲಿ? ಯಾವ ಪರಿಯಲಿನೆನೆಯಲಿ? ಎಂದು ಕೇಳುವ ಆಕೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಮತ್ತೆ ಅರಣ್ಯದಲ್ಲಿಯೇ ಹುಡುಕ ಬೇಕಾಗುತ್ತದೆ. ನೆಲ, ಮುಗಿಲುಗಳಲ್ಲಿ ಕಾಯ-ಜೀವಗಳನ್ನು ಕಲ್ಪಿಸಿ ಅಜಗಜಾಂತರವಿದ್ದ ಅಂತರವನ್ನು ಇಲ್ಲವಾಗಿಸಿ ಅವುಗಳನ್ನು ಒಂದು ಮಾಡುವ ಶಕ್ತಿ ಆಧ್ಯಾತ್ಮಕ್ಕಿದೆ ಯೆಂಬುದನ್ನು ಅಕ್ಕ ತನ್ನ ವಚನಗಳಲ್ಲಿ ಹೇಳಿರುವುದು ಗಮನಾರ್ಹ (ಪೃಥ್ವಿ ಪೃಥ್ವಿಯ ಕೂಡದ ಮುನ್ನ ಅಪ್ಪು-ಅಪ್ಪುವ ಕೂಡದ ಮುನ್ನ, ತೇಜ-ತೇಜವ ಕೂಡದ ಮುನ್ನ [೧೦] ಪಂಚೇಂದ್ರಿಯಂಗಳೆಲ್ಲ ಹಂಚು ಹರಿಯಾಗದ ಮುನ್ನ-ಚೆನ್ನ ಮಲ್ಲಿಕಾರ್ಜುನಂತೆ ಶರಣೆನ್ನಿರಿ ಎಂದು ಹೇಳುವ ಅಕ್ಕ ಸದಾ ಆತನನ್ನು ನೆನೆಯುತ್ತಲೆ ಇರುತ್ತಾಳೆ. ಹಾಗೆಯೇ 'ಮರವಿದ್ದು ಫಲವೇನು ನೆಳಲಿಲ್ಲದನ್ನಕ? ಧನವಿದ್ದು ಫಲವೇನು ದಯವಿಲ್ಲದನ್ನಕ್ಕ?--- ಎಂದು ಹಸು, ರೂಪಿನ ದೃಷ್ಟಾಂತ ಕೊಡುತ್ತ-ನಾನಿದ್ದು,

*೧೦. ಅಕ್ಕನ ವ.ಸಂ. ೨೩೨ ಪು. ೭೨*

ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ [೧೧] ಎಂದು ಆ ದೇವ ಜ್ಞಾನವು ತನ್ನಲ್ಲಿರುವದನ್ನು ವಿವರಿಸುತ್ತಾಳಿಲ್ಲಿ.

ಕಾಶಿಕನನ್ನು ತೊರೆದು ಬಂದ ಅಕ್ಕ ಕಲ್ಯಾಣಕ್ಕೆ ಪ್ರಯಾಣಿಸುವ ವೇಳೆಯಲ್ಲಿ ಅನೇಕ ರೀತಿಯ ಕಷ್ಟನಷ್ಟಗಳಿಗೆ ಗುರಿಯಾಗಿದ್ದಿರಬೇಕು. ಮಲ್ಲಿಕಾರ್ಜುನನ ಹುಡುಕಾಟದಲ್ಲಿ ಬಳಲಿ ಬೆಂಡಾಗಿದ್ದ ಅಕ್ಕ ಅರಣ್ಯದಲ್ಲಿಯ ಅನೇಕ ಸಸ್ಯ-ಮರ ಗಿಡಗಳ ಕಂಡು ಅವುಗಳ ರೀತಿ ನೋಡಿ ತನಗಾದ ಅನುಭವವನ್ನು ಹಂಚಿಕೊಳ್ಳುತ್ತಾಳೆ.

ಹಣ್ಣಮೆದ್ದ ಬಳಿಕ ಆಮರವನಾರು ತರಿದಡೇನು?
ಹೆಣ್ಣ ಬಿಟ್ಟ ಬಳಿಕ ಆಕೆಯನಾರು ಕೂಡಿದಡೇನು?
ಮಣ್ಣ ಬಿಟ್ಟ ಬಳಿಕ ಆಕೆಯ್ಯನಾರು ಉತ್ತಡೇನು?
ಚೆನ್ನ ಮಲ್ಲಿಕಾರ್ಜುನನರಿಯದ ಬಳಿಕ
ಆ ಕಾಯವ ನಾಯಿ ತಿಂದಡೇನು? ನೀರು ಕುಡಿದಡೇನು

*ಅಕ್ಕನ ವ.೩೩೩ ಪು. ೧೦೪*

ತನ್ನ ದೇವನ ಹುಡುಕಾಟದಲ್ಲಿ ಬಳಲಿದ ಅಕ್ಕನು ದೈಹಿಕವಾಗಿ ತುಂಬಾ ದಣಿದಿದ್ದಳೆನಿಸುತ್ತದೆ. ಅದಕ್ಕಾದ ಗಾಯ, ರಕ್ತ ಸೋರಿಕೆಯ ಚಿತ್ರ ಇಲ್ಲಿ ಸಿಗುತ್ತದೆ. ಕಾಯದ ಕಡೆಗೆ ಎಂದೂ ಗಮನವಿಡದ ಅಕ್ಕ ಅದು ಏನಾದರಾಗಲಿ ಎಂಬ ನಿಲುವಿಗೆ ಬಂದು ನಿಲ್ಲುವ ಸಂದರ್ಭದಲ್ಲಿ ಹಣ್ಣಿನ ಗಿಡದ ದೃಷ್ಟಾಂತವನ್ನಿಲ್ಲಿ ಅದಕ್ಕೆ ಬಳಸಿಕೊಂಡಿರುವುದು ಯತಾರ್ಥವೆನಿಸುತ್ತದೆ.

ಅವಳು ಬರುವ ಕಷ್ಟಗಳಿಗೆ ಎಂದೂ ಹೆದರಿದವಳಲ್ಲ ತುಂಬಾ ಧೈರ್ಯ ಶಾಲಿಯಾದ ಅಕ್ಕ ತಾನು ಎದುರಿಸುವ ಕಷ್ಟಗಳನ್ನೆಲ್ಲ ಚನ್ನಮಲ್ಲಿಕಾರ್ಜುನ ಮಾಡುವ ಪರೀಕ್ಷೆ ಎಂದು ಭಾವಿಸುತ್ತಾಳೆ. ಹೀಗಾಗಿ ಅವುಗಳನ್ನು ತುಂಬಾ ದಿಟ್ಟತನದಿಂದಲೂ ಎದುರಿಸುತ್ತಾಳೆ. ಆ ಭಾವವನ್ನು ಪ್ರತಿಬಿಂಬಿಸುವ ಪ್ರಾಕೃತಿಕ ಪ್ರತಿಮೆ ಹೀಗಿದೆ.

ಹಿಂದಣ ಹಳ್ಳ, ಮುಂದಣ ತೊರೆ
ಸಲ್ಲುವ ಪರಿಯಂತು ಹೇಳಾ!
ಹಿಂದಣ ಕೆರೆ, ಮುಂದಣ ಬಲೆ
ಹದುಳವಿನ್ನೆಲ್ಲಿಯದು ಹೇಳಾ!
ನೀನಿಕ್ಕಿದ ಮಾಯೆ ಕೊಲುತಿಪ್ಪುದು
ಕಾಯಯ್ಯಾ ಕಾಯಯ್ಯಾ ಚೆನ್ನಮಲ್ಲಿಕಾರ್ಜುನಾ

*ಅಕ್ಕನ ವ.೩೪೨ ಪು. ೮೩*

*೧೧. ಅಕ್ಕನ ವ.ಸಂ. ೨೭೧ ಪು.೮೪*

ಅಕ್ಕ ಸಿಕ್ಕಿ ಹಾಕಿಕೊಂಡಿರುವ ದ್ವಂದ್ವದ ಮಧ್ಯದ ಸ್ಥಿತಿಯ ಚಿತ್ರ ಇಲ್ಲಿದೆ. ಲೌಕಿಕ ಪಾರಮಾರ್ಥಿಕವೆರಡನ್ನು ನಡೆಸಲು ಸಾಧ್ಯವಿಲ್ಲ ಅದರಿಂದ ಆತನೇ ಕಾಪಾಡಬೇಕು ಎಂಬ ಮನವಿಯನ್ನು ಇಲ್ಲಿ ಅರಿಯಬಹುದಾಗಿದೆ. ಅಕ್ಕನ ವಚನಗಳು ಹೆಚ್ಚಾಗಿ ಅನುಭಾವದ ಚಿತ್ರವೇದಕವಾದ ಹೃದಯಸ್ಪರ್ಶಿ ಅಭಿವ್ಯಕ್ತಿಗಳು ಅರಸಂಚೆಗೆ ನಡೆಗಲಿಸಿದವರಿಲ್ಲ. ಗಿಳಿಗೆ ನುಡಿಗಲಿಸಬೇಕಾಗಿಲ್ಲ, ಕೋಗಿಲೆಯ ಪಂಚಮದಿಂಚರ ಅದರ ಹುಟ್ಟುಗುಣ, ಅದರಂತೆ ಕಾವ್ಯ ರಚನೆ ಅಕ್ಕನ ಬದುಕಿನ ನೈಜ ಭಾವ [೧೨] ಎನ್ನಲಾಗಿದೆ. ಅವಳು ಪಡೆದ ಲೋಕಾನುಭವವೆಲ್ಲ ನುಡಿರೂಪದಾಳಿ ನಿಂತಿರುವುದು ಚೆನ್ನಮಲ್ಲಿಕಾರ್ಜುನನ ಬಗೆನಿಸುವ ಆಕೆಯ ಉತ್ಕಟ, ಪ್ರೇಮ ಆತನನ್ನು ಕೂಡವ ತವಕದ ಅನುಭವ ಆ ಸಂದರ್ಭಗಳಲ್ಲಿ ಅವಳು ಪಡೆದ 'ಅನುಭಾವ' ಸಸ್ಯ 'ಪ್ರತಿಮೆಯ ವಚನಗಳಲ್ಲಿ ನಿರೂಪಿತವಾಗಿದೆ. ಅಕ್ಕನ ಅನುಭಾವ ಅನಂತವಾದುದು ಆತನನ್ನು ಬೆರೆಯುವ ಸಂಭ್ರಮದಲ್ಲಿ ಅವನನ್ನು ಕನಸಿನಲ್ಲಿ ಕಾಣುತ್ತಾಳೆ. ಆ ಸಂದರ್ಭ ಮತ್ತೆ ಮತ್ತೆ ಓದಬೇಕೆನಿಸುತ್ತದೆ.

ಅಕ್ಕಕೇಳಾ ನಾನೊಂದ ಕನಸ ಕಂಡೆ
ಅಕ್ಕಿ, ಅಡಕೆ ಟೆಂಗಿನಕಾಯಿ ಕಂಡೆ
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಚಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಹೊಹನ ಬೆಂಬತ್ತಿ ಕೈ ಹಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು

*ಅಕ್ಕನ ವ. ೯ ಪು. ೪*

ಈ ವಚನದ ಪರಾರಂಭವೇ ಒಂದು ಸೊಗಸು ಆತ್ಮೀಯ ವ್ಯಕ್ತಿಯೊಂದಿಗೆ ತನ್ನ ಆಪ್ತ ವಿಷಯವೊಂದನ್ನು ಹೇಳುವ ರೀತಿ 'ನಾನೊಂದ ಕನಸ ತಂಡೆ' ಎಂಬಲ್ಲಿ ಹೇಳಲಿರುವ ವಿಷಯದ ಬಗ್ಗೆ ತುಂಬ ಉತ್ಸಾಹವ್ಯಕ್ತವಾಗಿದೆ. ಆ ಕನಸನ್ನು ತೆರೆದಿಡುವ ರೀತಿ ಹಾಗೂ ಆ ಕನಸು ಕೊನೆಯಾದುದನ್ನು ಅದ್ಭುತವಾಗಿ ಚಿತ್ರಿಸುವ ರೀತಿ ತುಂಬಾ ಸೊಗಸಾಗಿದೆ. ತಾನು ಕಂಡ ಕನಸು ಶುಭದ್ದೆಂಬ ಸೂಚನೆ ಆಕೆ ಮೊದಲು ಹೇಳುವಳು 'ಅಕ್ಕಿ, ಅಡಕೆ ತೆಂಗಿನ ಕಾಯಿಗಳಲ್ಲಿದೆ ಸೃಷ್ಟಿಯಲ್ಲಿಯ ಸಸ್ಯಗಳನ್ನು ಜನರು ಕಾಣುವ ರೀತಿಯಲ್ಲಿ ಇಲ್ಲಿ ಹೇಳಿದ್ದು, ತುಂಬಾ ಮುಖ್ಯವಾಗುತ್ತದೆ. ಆ ಸಸ್ಯಗಳ ಬಳಕೆಯಿಂದ ಈ ವಚನಕ್ಕೂ ಒಂದು ಧ್ವನಿ ಪೂರ್ಣತೆಯೊದಗಿದೆ ಎನ್ನಬಹುದು. ಆಕೆ ಕನಸಿನಲ್ಲಿ ಕಂಡದ್ದು ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನನ್ನು ಚಿಕ್ಷಕ್ಕೆ ಬಂದ ಆ ಚೆಲುವನ ಸೊಗಸಿನ ಸೂಚಿಗಳಾಗಿ ಇಲ್ಲಿ ಬಳಕೆಯಾಗಿರುವ ಪದಗಳು ಎರಡೇ ಹೀಗೆ ಬಂದವನು ಮಿಕ್ಕಿ ಮೀರಿ ಹೋಹನು ಅಂಥವನನ್ನು ಬೆಂಬತ್ತಿ ಕೈವಿಡಿದೆ ಎಂಬಲ್ಲಿ ತನ್ನ ಸಾಹಸಿ. ಅದಕ್ಕೆ ಕಾರಣವಾದ ಶುಭ

*೧೨) ಸರಸ್ವತಿಗೌಡರ-ಬಸವ ಪರುಷ ೧೯೭೫ ಸಂ. ಹಮಾನಾಯಕ ಪು.೨೨೮*

ಸಸ್ಯಗಳ ವಸ್ತು ಹಾಗೂ ಆ ಸಾಹಸಕ್ಕೆ ದಕ್ಕಿ ಆಸ್ಪರ್ಷದ ಅನುಭವದ ಬಗ್ಗೆ ಅವಳು ತುಂಬಾ ಗೆಲುವಿನಿಂದ ಹೇಳಿಕೊಳ್ಳುವ ತೃಪ್ತಿ ಇಲ್ಲಿದೆ. ಅವಳು ಕೈ ಹಿಡಿದ ಆತನು ಬೇರಾರೂ ಆಗಿದರೆ ಚನ್ನಮಲ್ಲಿಕಾರ್ಜುನನೇ ಆಗಿದ್ದರಿಂದ ಆತನನ್ನು ಕಂಡು 'ಕಣರೆದೆ' ಎಂಬ ಮಾತು ಅವಳ ದಿವ್ಯಾನುಭವವನ್ನು ತಿಳಿಸುತ್ತದೆ. ಅದರೊಂದಿಗೆ ಆದಿವ್ಯಾನುಭವವನ್ನು ಕಂಡ ಕಣ್ಣು ಹೊಸ ಲೋಕವೊಂದಕ್ಕೆ ತೆರೆದು ಕೊಂಡದ್ದನ್ನು ನಿರೂಪಿಸುತ್ತದೆ. ಅದು ಕೊಡುವ ಚಿತ್ರ, ಹೇಳುವ ರೀತಿ ಜಾನಪದಶೈಲಿ, ಹಾಗೂ ಬಳಕೆಯಾದ ವಸ್ತುಗಳಿಂದ ಈ ವಚನ ಅಕ್ಕನ ಒಂದು ದಿವ್ಯಾನುಭವವನ್ನು ತುಂಬಾ ಸೊಗಸಾಗಿ ಕಟ್ಟಿಕೊಡುತ್ತದೆ ಎನ್ನಬಹುದು ಅಕ್ಕ ತನ್ನ ಪಾರಮಾರ್ಥಿಕ ದಿವ್ಯಾನುಭವಕ್ಕೆ ಕೊಡುವ ಇದು ಸಜೀವ ರೂಪವಾಗಿದೆ.

ಇಂಥ ಅನುಪಮ ದೃಶ್ಯಕಾಣಲುಕಾರಣವಾಗಿರುವ ಗುರುವನ್ನು ನೆನೆಸಿಕೊಳ್ಳುವ ಅಕ್ಕ ಆ ಭಾವವನ್ನು ಸುಂದರವಾಗಿ ಹೇಳುತ್ತಾಳೆ.

ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತಾಯಿತು
ಬರಲುಗೊಂಡ ಸಸಿಗೆ ಮಳೆ ಸುರಿದಂತಾಯಿತು ನೋಡಾ ಇಂದೆನೆಗೆ
ಇಹದ ಸುಖ ಪರದಗತಿ ನಡೆದು ಬಂದಂತಾಯಿತ್ತು ನೋಡಾ ಎನಗೆ
ಚನ್ನಮಲ್ಲಿಕಾರ್ಜುಯ್ಯಾನ
ಗುರುಪಾದವ ಕಂಡು ಧನ್ಯಳಾದೆ ನೋಡಾ

*ಅಕ್ಕನ ವ. ೩೨ ಪು. ೧೪*

ಈ ವಚನದಲ್ಲಿ ವ್ಯಕ್ತವಾಗಿರುವ 'ಉಪಮೆ'ಗಳು ತಟ್ಟನೆ ಒಂದು ಚಿತ್ರವನ್ನು ನಮ್ಮ ಕಣ್ಣೆದುರಿಗೆ ನಿಲ್ಲಿಸುತ್ತವೆ. ಹೇಳಬೇಕಾದ ಅರ್ಥವನ್ನು ಔಚಿತ್ಯ ಪೂರ್ಣವಾಗಿ ಬಿಂಬಿಸುವ ಸಾರ್ಥಕ ಕಾರ್ಯವನ್ನು ಇಲ್ಲಿಯ, ಕೆರೆ, ತೊರೆ, ಸಸಿ, ಮಳೆ ಮೂಡುತ್ತದೆ. ಅದರೊಂದಿಗೆ 'ಗುರುಪಾದವ' ಕಂಡ ಅಕ್ಕಳ ಧನ್ಯತೆಯನ್ನು ಅನುಭವವನ್ನು ಇಲ್ಲಿ ಸೊಗಸಾಗಿ ಹೇಳಲಾಗಿದೆ.

ವಚನಗಳು, ವೈವಿಧ್ಯ ಪೂರ್ಣವಾಗಿದ್ದು, ಅವು ಒಂದೊಂದು ಭಾಗವನ್ನು ಸನ್ನಿವೇಶಕ್ಕನುಗುಣವಾಗಿ ಮಾಡಿಸುತ್ತವೆ ಅವುಗಳಲ್ಲಿ ಬಿಡಿಬಿಡಿ ಸಂಗತಿಗಳಿವೆ. ಹೀಗಾಗಿ ಅಕ್ಕ ಬಳಸಿಕೊಂಡಿರುವ 'ಸಸ್ಯ' ಸಂಕೇತಗಳು ಸಹ ಭಿನ್ನಾರ್ಥವನ್ನು ಅಭಿವ್ಯಕ್ತಿಸುತ್ತದೆ.

ಭಾವಜೀವಿಯಾದ ಅಕ್ಕ ಅನುಭಾವಿ ಆಕೆಯ ವಚನಗಳು ಅರ್ಥಗರ್ಭಿತವಾಗಿ, ಭಾವಪೂರ್ಣವಾಗಿರುವಂತವುಗಳ ಕಿರಿದರಲ್ಲಿ ಹಿರಿದರ್ಥ ಹೇಳುವ ಅವಳ ರಚನಾರೀತಿ ಆಗಾಧವಾದುದು ಕಣ್ಣಿಗೆ ಬೀಳುವ ಸಹಜ ಘಟನೆಗಳಲ್ಲೂ ಹೆಜ್ಜಿನ ಅರ್ಥವನ್ನು ಕಂಡು ಕೊಂಡು ಮನೋವೇದಕವಾದ ವಿಷಯಗಳನ್ನು ಬಣ್ಣಿಸುತ್ತಾಳೆ.

ಚಂದನವ ಕಡಿದು ಕೊರೆದು ತೇದಡೆ
ನೊಂದೆನೆಂದು ಕಂಪ ಬಿಟ್ಟಿತ್ತೆ?
ತಂದ ಸುವರ್ಣವ ಕಡಿದೊರೆದೊಡೆ
ಬೆಂದು ಕಳಂಕ ಹಿಡಿದಿತ್ತೆ?

ಸಂದು ಸಂದು ಕಡಿದ ಕಬ್ಬನು ತಂದು ಗಾಣದಲಿಕ್ಕಿ ಅರೆದಡೆ
ಬೆಂದು ಪಾಕಗೊಳೆ ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ?
ನಾಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿರಿಸಲು ನಿಮಗೆ ಹಾನಿ
ಎನ್ನ ತಂದೆ ಚೆನ್ನಮಲ್ಲಿಕಾರ್ಜುನಯ್ಯಾ
ನೀ ಕೊಂದಡೆಯಾ ಶರಣೆಂಬುದ ಮಾಣೆ

*ಅಕ್ಕನ ವ. ೧೬೯ ಪು. ೫೨*

ಅಕ್ಕನ ಸಂಯಮತೆಯನ್ನು ಸಾಕ್ಷೀಕರಿಸುವ ಈ ವಚನವು ಒಂದು ಸುಂದರ ಭಾವಗೀತೆಯಂತಿದೆ. ಇಲ್ಲಿ ಪ್ರಕೃತಿಯಲ್ಲಿರುವ ಮೂರು ವಸ್ತುಗಳನ್ನು ಆಯ್ದುಕೊಂಡು ಅವುಗಳ ಮೂಲಗುಣಗಳ ನಿಷ್ಠೆಯನ್ನು ದಾಖಲಿಸುವುದರೊಂದಿಗೆ ಶರಣತ್ವದ ನಿಷ್ಠೆಯನ್ನು ಸ್ಪಷ್ಟಪಡಿಸಬೇಕಾಗಿದೆ. ಚೆನ್ನಮಲ್ಲಿಕಾರ್ಜುನಯ್ಯಾ ಕೊಂದಡೆ 'ಶರಣೆಂಬುದ ಮಾಣೆ' ಎಂಬ ನುಡಿಗೆ ಪೂರಕವಾಗಿ ಇಡೀ ವಚನ ಬೆಳೆದು ನಿಂತಿದೆ.

ಕಂಪು ಬೀರುವುದೇ ಚಂದನದ ವೈಶಿಷ್ಟ ಹೊಳೆಯುವದೇ ಸುವರ್ಣದ ವೈಶಿಷ್ಟ ಕಡಿದಂತೆಲ್ಲಾ ಚಂದನ ಕಂಪು ಬೀರತೊಡಗುತ್ತದೆ. ಸುವರ್ಣ ಹೊಳೆಯ ತೊಡಗುತ್ತದೆ. ಕಬ್ಬು ಸಿಹಿಯ ಕೊಡ ತೊಡಗುತ್ತವೆ. ಇವು ಮೂರು ವಸ್ತುಗಳಿಗೆ ನಡೆಯುವ ಕ್ರಿಯೆ ಮಾತ್ರ ಒಂದೆ ಅದು ಕಡಿಯುವದು ಕಡಿದಾಗಲೇ ಅದರ ಸತ್ವ ಸ್ಪಷ್ಟವಾಗುವದು. ಹಾಗೆಯೇ ಶರಣನಾದವನಿಗೆ ಯಾವ ತೊಂದರೆ ಕೊಟ್ಟರೂ ಏನೂ ಆಗದು, ಅಕ್ಕ ಇಲ್ಲಿ ಆಯ್ದು ಕೊಂಡ ವಸ್ತುಗಳೇ ತುಂಬಾ ವಿಶಿಷ್ಟವಾಗಿದೆ. ಪ್ರಕೃತಿಯಲ್ಲಿಯೇ ಇಂತಹ ವಸ್ತುಗಳಿಗೆ ಕೆಲ ವಿಶಿಷ್ಟ ಗುಣಗಳಿರುವುದನ್ನು ಜನ ಜಂಗುಳಿಯಲ್ಲಿಯೇ ವಿಶಿಷ್ಟವಾಗಿರುವ ಶರಣರಿಗೆ ಹೋಲಿಸಲಾಗಿದೆ. [೧೩] ಈ ರೀತಿ ಅಕ್ಕ ಇಲ್ಲಿ ಪ್ರಕೃತಿಯ ವಸ್ತುಗಳನ್ನು ಬಳಸಿಕೊಳ್ಳುವ ರೀತಿಯು ತುಂಬಾ ಕುತೂಹಲ ಕಾರಿಯಾಗಿ ಕಾಣುತ್ತದೆ.

ಈ ರೀತಿಯ ಭಾವವನ್ನು ಹೇಳುವ "ಗಿರಿಯಲಲ್ಲದೆ ಹುಲ್ಲು ಮೊರಡಿಯಲ್ಲಾಡುವುದೆ ನವಿಲು? ಮಾಮರ ತಿಳಿತಲ್ಲದೆ ಸ್ವರಗೈವುದೆ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೆ ಭ್ರಮರ? ಎನ್ನದೇವ ಚೆನ್ನಮಲ್ಲಿಕಾರ್ಜುನಂಗಲ್ಲದೆ. [೧೪] ಅನ್ಯಕ್ಕೆಳೆಸುವದೇ ಎನ್ನಮನ? ಹೇಳಿರೆ ಕೆಳವಿಯರಿರಾ ಎನ್ನುವಲ್ಲಿ ನವಿಲು, ಹಲ್ಲು, ಮಾಮರ, ಕೋಗಿಲೆ, ಪರಿಮಳ ಪುಷ್ಪದಂತಹ ಪಕ್ಷಿ ಸಸ್ಯಗಳ ಮೂಲಕ ಶರಣರ ಮನದಿಂಗಿತವನ್ನು ಸ್ಪಷ್ಟಪಡಿಸಲಾಗಿದೆ. ಇವು ಇಲ್ಲಿ ಬಳಕೆಯಾಗಿರುವ ಶ್ರೇಷ್ಠ ಸಂಕೇತ ಹಾಗೂ ಕನಿಷ್ಠ ಸಂಕೇತಗಳಾಗಿ ಬಳಕೆಯಾಗಿದೆ. ಇದು ಪ್ರಕೃತಿಯಲ್ಲಿಯ ಇಂತಹ ವೈವಿದ್ಯತೆಯನ್ನು ತೋರುತ್ತದೆ. ನವಿಲು, ಹಂಸ, ಕೋಗಿಲೆ, ಬ್ರಮರಗಳು ಶ್ರೇಟ ಗುಣದ ವಿಶಿಷ್ಟತೆಯಿಂದ ಕಂಡು ಬರುತ್ತಿವೆ. ಅಂತೆಯೇ ಅವುಗಳು ತಮಗೆ ಶ್ರೇಷ್ಠತಮವೆಂದೆನಿಸುವ ತಾಣಗಳಲ್ಲಿ ಇರುತ್ತವೆ ಹೊರತು ಬೇರೆ

೧೩. *ಡಾ॥ ಬಸವರಾಜ ಸಂಬಂಧ ವಚನ ಚಳುವಳಿ-೧೯೭೨ ಪು.೧೨೨*

೧೪. *ಅಕ್ಕನ ವ. ಸಂ. ೫ ಪು. ೫೮*

ತಾಣಗಳಲ್ಲಿರಲಾರವೆಂಬುದನ್ನು ಹೇಳುವದರ ಮೂಲಕ ಚೆನ್ನಮಲ್ಲಿಕಾರ್ಜುನಂಗಲ್ಲದೆ ಅನ್ಯಕ್ಕೆಳಸುವದೆ ಎನ್ನ ಮನ? ಎಂಬ ನುಡಿಗೆ ಒತ್ತು ಬೀಳುತ್ತದೆ. ಪ್ರಕೃತಿಯಲ್ಲಿರುವ ಈ ತಾಣಗಳನ್ನು ಸರಿಯಾಗಿ ಗುರುತಿಸುವ ಅಕ್ಕ ಅದನ್ನು ತನ್ನ ಬದುಕಿನ ಮೂಲಕ ಬಿಚ್ಚಿ ತೋರಿಸುವ ಪರಿ ನಿಜಕ್ಕೂ ಸೃಜನಶೀಲವಾಗಿದೆ.

ತಾನು ನೆಚ್ಚಿದ ಮೆಚ್ಚಿದ ತನ್ನ ಚೆನ್ನಮಲ್ಲಿಕಾರ್ಜುನನ ಹುಡುಕಾಟವನ್ನು ಆಕೆ ಪ್ರಕೃತಿಯ ಮೂಲಕವೇ ಪ್ರಾರಂಭಿಸುವದು ತುಂಬಾ ಅರ್ಥಪೂರ್ಣವಾಗಿದೆ. ಯಾವುದು ಚರಾಚರ ಜೀವ ಜಂತುಗಳ ಸೃಷ್ಟಿಗೆ ಕಾರಣವೂ ಆ ಪ್ರಕೃತಿಯನ್ನೇ ಅಚಲವಾಗಿ ಅಕ್ಕ ನಂಬುತ್ತಾಳೆ. ಗಿರಿಗಳಲ್ಲಿ, ವನಗಳಲ್ಲಿ, ಗಿಡ ಗಿಡಗಳಲ್ಲಿ ದೇವಬಾರಯ್ಯ ಕರುಣೆಯ ತೋರಯ್ಯಾ' ಎಂದು ಕರೆಯುತ್ತಾಳೆ. ಆದೇವನಡಗಿರುವ ತಾಣವನ್ನು ಕೇಳಿ ಆತನಿಗಾಗಿ ಹಂಬಲಿಸುತ್ತಾಳೆ ಹೀಗಾಗಿ ಈ ಪ್ರಾಣಿ, ಪಕ್ಷಿ, ಸಸ್ಯ ಸಂಸ್ಕೃತಿಯ ಪ್ರಕೃತಿಯಲ್ಲಿಡಗಿದ ಚೆನ್ನ ಮಲ್ಲಿಕಾರ್ಜುನನ್ನು ಕಾಣುವ ರೀತಿ ಉಳಿದ ವಚನಕಾರರಿಗಿಂತ ಅಕ್ಕನಲ್ಲಿ ವಿಶಿಷ್ಟವಾಗಿದೆ ಎನ್ನಬಹುದು.

ಎರದಮುಳ್ಳಿನಂತೆ ಪರಗಂಡರೆನಗವ್ವಾ<br>
ಸೊಂಕಲಮ್ಮೆ ಸುಳಿಯಲಮ್ಮೆ<br>
ನಂಬಿ ನಚ್ಚಿ ಮಾತಾಡ ಲಮ್ಮೆನವ್ವಾ<br>
ಚೆನ್ನಮಲ್ಲಿಕಾರ್ಜುನನಲ್ಲದ ಗಂಡರಿಗೆ<br>
ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ

*ಅಕ್ಕನ ವ. ೮೭ ಪು. ೩೧*

ಅಕ್ಕನ ನುಡಿಗಳಲ್ಲಿ ಅನುಭಾವದ ಅತೀ ಎತ್ತರವಿದೆ. ಚೆನ್ನ ಮಲ್ಲಿಕಾರ್ಜುನನ ಅಂತರಂಗದ ಪ್ರತಿಮೆಯಾಗಿ ಮಿಕ್ಕಗಂಡರು 'ಎರದ ಮುಳ್ಳಿನ' ಸಂಕೇತವಾಗಿ ಇಲ್ಲಿ ಮೂಡಿನಿಂತಿದ್ದಾರೆ ಬಹಿರಂಗ ಸುಖವನ್ನು ದಿಕ್ಕರಿಸಿ ಆತ್ಮ ಸಾಕ್ಷಿಯಂತೆ ನಡೆದುಕೊಂಡು ಆತ್ಮಗೌರವವನ್ನು ಸದಾ ಕಾಪಾಡಿಕೊಂಡಿರುವ ಸ್ವಾಭಿಮಾನಿ ಇಲ್ಲಿಯ 'ಎರದ ಮುಳ್ಳು' ಉಪಮಾನವಾಗಿ ಉಳಿದ ಗಂಡಂದಿರನ್ನು ಸೂಚಿಸುತ್ತದೆ. ಎಂದೂ ತಾನು ಅದನ್ನು ಸ್ಪರ್ಶಿಸುವುದಿಲ್ಲವೆನ್ನುವ ಅಕ್ಕ ಅವರಿಗೆ ಎದೆಯಲ್ಲಿ ಮುಳ್ಳುಂಟೆಂಡು ಅವರಿಂದ ದೂರವಾಗಿರುವುದನ್ನು ಸ್ಪಷ್ಟಪಡಿಸುತ್ತಾಳೆ.

ಇದೇ ರೀತಿ ಅವಳು ಕದಳಿವನಕ್ಕೆ ಹೋಗಿ ಅದನ್ನು ಪ್ರತ್ಯಕ್ಷ ಕಂಡು ಸಾಕ್ಷಾತ್ಕರಿಸಿಕೊಂಡದನ್ನು ಮನನಂಬುವಂತೆ ವರ್ಣಿಸುತ್ತಾಳೆ ಅವಳ ೩ ವಚನಗಳಲ್ಲಿ ಬರುವ 'ಕದಳಿ'ಯು ಶ್ಲೇಷಾತ್ಮಕವಾಗಿದ್ದು ತನ್ನದೇ ಆದ ಅರ್ಥದ ಪರಿಯನ್ನು ವಿವರಿಸುತ್ತದೆ.

ಕದಳಿ ಎಂಬುದು ತನು, ಕದಳಿ ಎಂಬುದು ಮನ
ಕದಳಿ ಎಂಬುದು ವಿಷಯಂಗಳು
ಕದಳಿ ಎಂಬುದು ಭವಘೋರಾರಣ್ಯ
ಈ ಕದಳಿ ಎಂಬುದ ಗೆದ್ದು ತವೆ ಬದುಕಿಬಂದು
ಕದಳಿಯ ಬನದಲ್ಲಿ ಭವಹರನ ಕಂಡೆನು
ಭವಗೆದ್ದು ಬಂದ ಮಗಳೆ ಎಂದು
ಕರುಣದಿ ತೆಗೆದು ಬಿಗಿದಪ್ಪಿದಡೆ
ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು

*ಅಕ್ಕನ ವ. ೧೧೫*

ಪಲ ಒಳಗೆ ಪಕ್ವವಾಗಿ ಹೊರಗಣ ಸಿಪ್ಪೆ ಒಪ್ಪಗೆಟ್ಟ, ಅಕ್ಕ ಒಡಲ ಕಳವಳಕ್ಕಾಗಿ ಅಡವಿಯನ್ನು ಹೊಕ್ಕು ಗಿಡ ಗಿಡಕ್ಕೆ ಬೇಡಿ ತಿಂದೆನು ಅವು ಲಿಂಗಕ್ಕೆಂದು ನೀಡಿ ಭಕ್ತರಾದವು, ನಾನು ಬೇಡಿ ಭವಿವಾದೆನೆನ್ನುವ ಅಕ್ಕ ಸೃಷ್ಟಿಯ ಋಣವನ್ನು ಸ್ಮರಿಸಿಕೊಳ್ಳುತ್ತಾಳೆ ಶರಣರ ಅನುಭಾವ ಸಂಗದಿಂದ ಪರಮ ಸುಖಿಯಾಗಿ ಬದುಕಿ ಕೊನೆಗೆ

ವನವೆಲ್ಲ ಕಲ್ಪ, ಗಿಡವೆಲ್ಲ ಮರಜವಣಿ,
ಶಿಲೆಗಳೆಲ್ಲ ಪರುಷ ನೆಲನೆಲ್ಲಾ ಅವಿಮುಕ್ತ ಕ್ಷೇತ್ರ,
ಜಗವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪುರುಷ ಮೃಗ,
ಎಡಹುವ ಹೆರಳೆಲ್ಲ ಚಿಂತಾಮಣಿ,
ಚೆನ್ನಮಲ್ಲಿಕಾರ್ಜುನಯ್ಯನ ನೆಚ್ಚಿನ ಗಿರಿಯ ಸುತ್ತಿ,
ನೋಡುತ್ತ ಬಂದು ಕದಳಿಯ ಬವನವ ಕಂಡೆನಾನು

*ಅಕ್ಕನ ವ. ೧೯೯ ಪು. ೬೨*

ಎಂದು ತಾನು 'ಕದಳಿ' ಬನಕ್ಕೆ ಪ್ರಯಾಣ ಮಾಡಿದ್ದನು ವಿವರಿಸುತ್ತಾಳೆ ಈ ವಚನದಲ್ಲಿ ಅಕ್ಕ ಕಂಡಿರುವ 'ಕದಳಿ'ಯ ಪರಿಸರ ಅದ್ಬುತವಾಗಿ ವರ್ಣಿತವಾಗಿದೆ. ಈ 'ಅರಣ್ಯ ಸಂಪತ್ತು' ತುಂಬಾ ಬೆಲೆಬಾಳುವಂತಹದು ಅಲ್ಲಿಯ ವನ, ಗಿಡ, ಶಿಲೆ, ನೆಲ, ಜಲ, ಮೃಗ ಸಂಪತ್ತು ಅಪಾರವಾದದು. ಅದನ್ನು ಕ್ರಮವಾಗಿ ಕಲ್ಪವೃಕ್ಷ ಮರಜವಣಿಗೆ ಪುರುಷ ಅವಿಯುಕ್ತ ಕ್ಷೇತ್ರ, ನಿರ್ಜರಾಮೃತ, ಪರುಷ ಮೃಗ, ಚಿಂತಾ ಮಣಿಗೆ ಹೋಲಿಸುತ್ತಾಳೆ ಅದು ದೇವನಿರುವ ತಾಣವಾಗಿದ್ದರಿಂದ ಅದರಲ್ಲಿ ಏನೆಲ್ಲ ಇದೆ. ಅದನ್ನು ಕಾಣುವದೇ ಒಂದು ಮಹಾಭಾಗ್ಯ ಅಂಥ ಗಿರಿಯನ್ನು ಹತ್ತಿ ಸುತ್ತಿ ಈ ಎಲ್ಲ ವನ ಸಂಪತ್ತನ್ನು ಕಾಣುತ್ತ ಕೊನೆಗೆ 'ಕದಳಿ' ಬನ ಕಂಡದ್ದಾಗಿ ತಿಳಿಸುತ್ತಾಳೆ.

ಆ 'ಕದಳಿ' ವನ ವೆಂಬುದನ್ನು ಅನುಭಾವ ತುಂಬಿ ವರ್ಣಿಸುವ ಅಕ್ಕ ಅದನ್ನು ತನು,ಮನ, ವಿಷ ಯಂಗಳೆಂದು ಕರೆದು, ಅದರ ಶ್ಲೇಷಾರ್ಥವನ್ನು ನಮ್ಮ ಮುಂದಿಡುತ್ತಾಳೆ ನಂತರದಲ್ಲಿ ಅದನ್ನು ಭವಘೋರಾರಣ್ಯವೆಂದು ತಿಳಿಸಿ ತಾನು ಆ ಭವಘೋರಾರಣ್ಯವನ್ನು ದಾಟಿ ಬಂದ ಅನುಭವವನ್ನು ತುಂಬಾ ಸೊಗಸಾಗಿ ಹೇಳುತ್ತ. ಆ 'ಕದಳಿ'ಯಲ್ಲಿ ತಾನು ಕರ್ಪೂರವಾಗಿ ಸೇರಿದ್ದನ್ನು ತಿಳಿಸುತ್ತಾಳೆ. ಬೆಳಗು ಬೆಳಗನ್ನು ಸೇರಿದ್ದು, ಬಯಲು ಬಯಲನ್ನು ಬೆರಸಿದ್ದನ್ನಿಲ್ಲಿ ಕಾಣಬಹುದು. ಜಗತ್ತಿನ ಆಧ್ಯಾತ್ಮಕ ಇತಿಹಾಸದಲ್ಲಿಯೇ ಇದೊಂದು ಅಪೂರ್ವ ಘಟಕೆ–ಆಕೆಗೆ ಸರಿದೊರೆಯಾಗಿ ನಿಲ್ಲಬಲ್ಲರು ಇನ್ನೊಬ್ಬರಿಲ್ಲವೆನ್ನ ಬಹುದು.

# ಅಧ್ಯಾಯ - ಐದು

# ಅಭಿವ್ಯಕ್ತಿಯಲ್ಲಡಗಿದ ಅನುಭಾವ ಸಂಪತ್ತು ಹಾಗೂ ಅಕ್ಕನ ವ್ಯಕ್ತಿತ್ವ ದರ್ಶನ

# ಅಭಿವ್ಯಕ್ತಿಯಲ್ಲಡಗಿದ ಅನುಭಾವ ಸಂಪತ್ತು ಹಾಗೂ ಅಕ್ಕನ ವ್ಯಕ್ತಿತ್ವ ದರ್ಶನ

ವಚನ ಸಾಹಿತ್ಯ ಒಂದು ಅಪೂರ್ವ ಸೃಷ್ಟಿ 'ಕಾಲಮಾನದ ಅಗತ್ಯ ಮತ್ತು ನಿತಿ ಇವುಗಳ ಸಹಜ ಸಹಯೋಗದ ಸಂಕೇತವಾಗಿ ವಚನ ರೂಪವು ಜನ್ಮ ತಾಳಿದು [೧] ಒಂದೇ ಮಾತಿನಲ್ಲಿ ಹೇಳುವದಾದರೆ ವಚನಗಳೆಂದರೆ ನಡುಗನ್ನಡ ಶೈಲಿಯ ಅನುಭಾವ ಗದ್ಯದಲ್ಲಿ ಉಸುರಿದ ಆದ್ಯಾತ್ಮ ಭಾವಗೀತೆಗಳು, ಜಗತ್ತಿನ ಸಾಹಿತ್ಯದಲ್ಲಿ ಇವುಗಳನ್ನು ಹೋಲುವ ರೂಪ ಕಡಿಮೆ. ಕನ್ನಡದಲ್ಲಿಯಂತೂ ಅಪೂರ್ವ ವಚನಗಳ ಲಯವನ್ನು 'ಅನಿಯತ' ಎಂದು ನಿಷೇಧಾತ್ಮಕವಾಗಿ ಹೇಳದೆ 'ಸ್ವಚ್ಚಂದ ಸೂಕ್ಷ್ಮ' ಎಂದು ವಿಧಿಪರವಾಗಿ ಹೇಳುವದು ಸಮಂಜಸವಾಗಿ ತೋರುತ್ತದೆ ಎಂಬದು ಮುಗುಳಿಯವರ ಹೇಳಿಕೆ ಈ ವಚನಗಳು ವನಕಾರರ ಬುದ್ದಿ ಮನಸ್ಸುಗಳ ಮಥನದಿಂದ ಹುಟ್ಟಿ ಬಂದವು ಹೆಣ್ಣೆನ್ನದೆ, ಗಂಡೆನ್ನದೆ ಎಲ್ಲ ವರ್ಗದ ಜನರು ಬಸವಣ್ಣನವರ ಸುತ್ತ ನೆರೆದು ಒಂದು ಜೀವಂತವಾದ ಜಂಗಮ ಧರ್ಮವನ್ನು ಸಂಸ್ಥಾಪಿಸಿದರು. ಅಂಥ ವರಲ್ಲಿ ಅಕ್ಕ ಮಹಾದೇವಿ ಅಗ್ರಗಣ್ಯಳು.

ಮಹಾದೇವಿಯಕ್ಕ ಕವಿಹೃದಯದ ಶ್ರೇಷ್ಠ ವಚನಕಾರ್ತಿ ಈಗ ದೊರೆತ ೩೫೪ ವಚನಗಳಲ್ಲಿ ಅವಳ ಜೀವನ ಸಾಧನೆಯ ಎಲ್ಲ ಹಂತದ ಭಾವ ಲಹರಿಗಳಿವೆ. ಭಾವ ಗೀತಾತ್ಮ ಗುಣದ ಆಕೆಯ ಬರವಣಿಗೆಯು ವೈಷಿಷ್ಟ ಪೂರ್ಣವಾಗಿದ್ದು, ಅವುಗಳ ತುಂಬ ಜೀವಂತ ಅಬಿವ್ಯಕ್ತಿಯನ್ನು ಕಾಣಬಹುದು. ಆಕೆಯ ಜೀವನದ ನೋವು, ನಲಿವು, ಆಧ್ಯಾತ್ಮದ ನಿಲುವು ವಿಶೇಷವಾಗಿ ಶರಣ ಸತಿ-ಲಿಂಗಪತಿ ಭಾವವನ್ನು ಪ್ರಧಾನ ಸ್ಥಾಯಿಯಾಗಿ ಗುರುತಿಸಬಹುದು. ಅಕ್ಕನ ಅನುಭಾವ ತುಂಬಾ ಹಿರಿದಾದುದು. ಅದರಲ್ಲೂ ಸತಿ-ಪತಿ ಭಾವದ ವಚನಗಳಲ್ಲಿ ಒಂದು ತೆರನಾದ ಔನ್ನತ್ಯವನ್ನು ಕಾಣುತ್ತಿದ್ದರೆ, ಇನ್ನೊಂದು ಬಗೆಯಲ್ಲಿ ಅವಳು ಜೀವನದುದ್ದಕ್ಕೂ ಅನುಭವಿಸಿದ ಸಂಕಷ್ಟಗಳ ನಿರೂಪಣೆಯು ಅಲ್ಲಿಯ ಆಳವಾದ ಅನುಭವದಲ್ಲಿ ಕಾಣಿಸಿಗುತ್ತದೆ. ಬೆಳದಿಂಗಳು ಬಿಸಿಲಾಯಿತು' ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ' 'ಅನ್ನವ ನೀಡುವವರಿಂಗೆ ಧಾನ್ಯವೆಸೆವ ಲೋಕ,' 'ಶರಣು' ಮೆಟ್ಟಿದ ಧರೆ ಪಾವನವಯ್ಯಾ' 'ಆನು ನಿನ್ನ ಹಾಡಿದಲ್ಲಿದೆಮ ಸೈರಿಸಲಾರೆನಯ್ಯ' 'ಬರಲು ಗೊಂಡ ಸಸಿಗೆ ಮಳೆ ಸುರಿದಂತಾಯ್ತು. 'ಅಳಿ ಸಂಕುಲವೆ ಮಾಮರವೇ, ಬೆಳದಿಂಗಳೇ, ಪರಿಮಳದುದಕವ

*೧) ರಂ.ಶ್ರೀ ಮುಗಳಿ- ಕನ್ನಡ ಸಾಹಿತ್ಯ ಚರಿತ್ರೆ - ಪು.ಸಂ. ೨೩೫*

ನೆರೆದವರಾರು? ಉದಯದಲ್ಲೆದ್ದು ನಿಮ್ಮ ನೆನೆವನಯ್ಯಾ, 'ಉದಯಾಸ್ತಮಾನ ಎಂಬೆರಡು ಕೊಳಗ, 'ಉಸುರಿನ ಪರಿಮಳವಿರಲು ಕುಸುಮದ ಹಂಗೇಕಯ್ಯಾ' 'ಬೆರಳು ತಾಳಹಣ್ಣ ಹಿಸುಕಿದಡೆ ಮೆಲಲುಂಟೆ? 'ಎರದ ಮುಳ್ಳಿನಂತೆ ಪರಗಂಡರೆನಗವ್ವಾ' 'ಆನು ಬೆಡಿ ಭವಿಯಾದೆ ಅವು ನೀಡಿ ಭಕ್ತರಾದವು,' ಒಲೆಯ ಹೊಕ್ಕು ಉರಿಯ ಮರೆದವಳು,' 'ಕಟ್ಟಿದ ಕೆರೆಗೆ ಕೋಡಿಮಾಣದು,' 'ತೊಟ್ಟುಬಿಟ್ಟು ಬಿದ್ದ ಹಣ್ಣು ಮರಳಿ ತೊಟ್ಟನಪ್ಪಬಲ್ಲುದೆ?' 'ಕದಳಿ ಎಂಬುದು ತನು' 'ಕರುಹಿನ ರೂಹು ಅರಗಿಳಿಯ ನೋದಿಸುವಂತೆ,' 'ಕಲ್ಲು ತಾಗಿದ ಮಿಟ್ಟೆ ಕೆಲಕ್ಕೆ ಸಾರುವಂತೆ,' 'ಉರೆ ತಾಗಿದ ಕೋಲುಗಿರಿ ತೋರುವುದೇ? 'ಗಿರಿ ಮೇಲೆ ಬಿದ್ದಡೆ ಪುಪ್ಪವೆಂಬೆನು' 'ಗಿರಿಯಲ್ಲಲ್ಲದೆ ಹುಲ್ಲುಮೊರಡಿ ಯಾಲ್ಲಾಡುವುದೆ ನವಿಲು? 'ಮನ ಕರಗದವರಲ್ಲಿ, ಪುಷ್ಪವನೊಲ್ಲೆಯಯ್ಯಾ ನೀನು,' ಭಾನು ವಿನಂತಪ್ಪುದು ಜ್ಞಾನ,' ಈ ಮೊದಲಾದ ನುಡಿ ಗಟ್ಟುಗಳು ಅಕ್ಕನ ಜೀವನದ ಅನುಭಾವವನ್ನು ಕಟ್ಟಿಕೊಡುತ್ತೆ.

ಅಕ್ಕ ವಿಚಾರ ಸ್ವಾತಂತ್ರ್ಯದ ಮಹಿಳೆ, ಗಂಡ ಮತ್ತು ವಿಚಾರ ಸ್ವಾತಂತ್ರ್ಯದ ಈ ಎರಡು ಆಯ್ಕೆಗಳು ಆಹ್ವಾನವಾದಾಗ ಗಂಡನನ್ನು ದಿಕ್ಕರಿಸಿ ವಿಚಾರ ಸ್ವಾತಂತ್ರ್ಯವನ್ನು ಆಯ್ದುಕೊಂಡುದು ಲೋಕದ ಇತಿಹಾಸದಲ್ಲಿಯೇ ಅಪರೂಪದ ಘಟನೆಯಾಗಿದೆ. ತನ್ನ ಜೀವನದ ಉತ್ತಾರಾರ್ಧದಲ್ಲಿ ಅವಳು ಮಲ್ಲಿಕಾರ್ಜುನನ ವಶವಾಗಿ ಲೋಕವನ್ನೆಲ್ಲ ಸುತ್ತಿ ಸುತ್ತಿ, ಕಲ್ಯಾಣವನ್ನು ಪ್ರವೇಶಿಸಿದ್ದು, ಮಹತ್ವದ ಒಂದು ಘಟನೆ ಅನಭವ ಮಂಟಪದಲ್ಲಿ ಅವಳು ಎದುರಿಸಿದ ಪ್ರಸಂಗ, ಕೆಳಸಿಕೊಂಡ ಪ್ರಶ್ನೆ, ಕೊಟ್ಟ ಉತ್ತರಗಳು ಅವಳ ಚಿಂತನೆಯ ಔನ್ನತ್ಯವನ್ನು ಸಾರುತ್ತವೆ. ಕಲ್ಯಾಣದಲ್ಲಿ ಅಲ್ಲಮ ಪ್ರಭು, ಬಸವಣ್ಣ, ಚೆನ್ನಬಸವಣ್ಣ ಅಕ್ಕನಾಗಮ್ಮ, ಮಡಿವಾಳ ಮಾಚಿದೇವ ಮೊದಲಾದ ಶರಣರ ಮಧ್ಯದಲ್ಲಿ ಎಲ್ಲರೂ ಗೌರವಿಸುವಂತಹ ರೀತಿಯಲ್ಲಿ ಬದುಕಿದ ಮಹಾದೇವಿ ಅವಳೇ ಹೇಳುವಂತೆ "ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು ಭಾವಿಸಲು ಗಂಡುರೂಪು" ಎಂಬಂತೆ ವ್ಯಕ್ತಿತ್ವವನ್ನು ರೂಪಿಸಿಕೊಂಡಳು.

ಅಕ್ಕ ಮಹಾದೇವಿ ವ್ಯಕ್ತಿ, ಸಮಾಜ, ಜೀವಜಗತ್ತು ಮತ್ತು ಅನಂತವಾದ ವಿಶ್ವವನ್ನು ನೋಡುವ ಕ್ರಮವನ್ನು ಇಲ್ಲಿ ತಿಳಿಸಿಕೊಟ್ಟಿದ್ದಾಳೆ. ಪ್ರತಿಯೊಬ್ಬ ಮಾನವ ಈ ನಾಲ್ಕು ಪ್ರಕಾರಗಳಲ್ಲಿ, ನಮ್ಮನ್ನು ನಾವು ಗುರುತಿಸಿಕೊಳ್ಳುತ್ತ ಸಾಗಬೇಕೆಂಬುದನ್ನು ತಿಳಿಸಿಕೊಟ್ಟಿದ್ದಾಳೆ ಹೀಗೆ ಜೀವನ ನಡೆಸಿ, ಮುನ್ನಡೆಯುತ್ತ ಹೋಗುವ ಪ್ರತಿಯೊಬ್ಬಿವ್ಯಕ್ತಿಯು ಈ ಜಗತ್ತಿನಲ್ಲಿ ಯಾರಿಗೂ ಹೊರಗಿನವರಾಗುವುದಿಲ್ಲ. ಹಾಗೆಯೇ ಇಡೀ ಪ್ರಪಂಚವೂ ನಮಗೆ ಹೊರಗಿನದಾಗುವುದಿಲ್ಲ. ಇಲ್ಲಿಯ ಸಕಲ ಜೀವ ಜಂತುಗಳನ್ನು ಮನುಷ್ಯ ಆತ್ಮೀಯವಾಗಿ ಪ್ರೀತಿಸಬೇಕು. ಆತ್ಮೀಯ ಭಾವವೇ ಆ ಶಿವನನ್ನು ಕಾಣುವ ಮತ್ತು ಕಾಣಿಸುವ ಮಾರ್ಗವೆಂಬುದನ್ನು ಮಹಾದೇವಿ ನಡೆದು-ನುಡಿದು ತೋರಿಸಿದಳು. ಅವಳಿಗೆ ಈ ಜಗತ್ತು

ಎಂದೂ ಬೇರೆಯಾಗಿ ಕಾಣಲಿಲ್ಲ. ಇಲ್ಲಿಯ ಮಾನವೀಯ ಬದುಕಿಗೆ ಅದೆಲ್ಲ ಅನಿವಾರ್ಯವಾಗಬೇಕಾಗುತ್ತದೆ. ಈ ಸೃಷ್ಟಿಯಲ್ಲಿ ಕಾಣಸಿಗುವ ಪ್ರತಿಯೊಂದು ವಸ್ತು, ಹೂ, ಗಿಡ, ಮರ, ಬಳ್ಳಿ, ನೆಲ, ನೀರು, ಆಕಾಶ, ಅಗ್ನಿ, ವಾಯು, ಗಿಳಿ, ನವಿಲು, ಕೋಗಿಲೆ, ದುಂಬಿಗಳು, ಎಮ್ಮೆ, ಆಕಳು, ಆನೆ, ಕುದರೆ, ಮೃಗಕುಲ ಹಾಗೂ ಹಲವು ತೆರನಾದ ಕೀಟ ಜಗತ್ತು, ಅವಳಿಗೆ ಪ್ರಯವಾಯಿತು. ಅವುಗಳಲ್ಲೆಲ್ಲ ಜೀವನಾನುಭವವನ್ನು ಕಂಡಳು. ಯಾಕಂದರೆ ಈ ಪ್ರೀಯಕೃತಿಯನ್ನು ಅಕ್ಕ ತನ್ನ ಹೃದಯ ತೆರೆದು ನೋಡಿದಳು. ಅವುಗಳ ಕ್ರಿಯೆಗಳ ಮೂಲಕ, ಅವುಗಳಲ್ಲಿರುವ ಸೌಂದರ್ಯದ ಮೂಲಕ ತನ್ನ ಆತ್ಮಸಂಗಾತಿ ಚನ್ನಮಲ್ಲಿಕಾಜುನನ್ನು ಹುಡುಕಿದಳು ಆತ ಅವ್ಯಕ್ತವಾಗಿ ಅಲ್ಲೆಲ್ಲ ಅಡಗಿ ಕುಳಿತು ಅವಳನ್ನು ಅಲೆದಾಡಿಸಿದನು. ಆ ಮಹಾದೇವಿಗೆ ಎನೆಲ್ಲ ಕಷ್ಟ, ನೋವು, ಕಾರ್ಪಣ್ಯಗಳನ್ನು ನೀಡಿ, ಅವಳನ್ನು ಹೆದರಿಸಿದನು ಅದಕ್ಕೆ ಅವಳೆಂದು ಅಂಜಲಿಲ್ಲ, ಕುಂದಲಿಲ್ಲ ಯಾಕಂದರೆ ಇಡೀ ಪ್ರಕೃತಿ ಅವಳೊಂದಿಗಿತ್ತು, ಅದನ್ನು ಅವಳು ತನ್ನದೊಂದು ವಚನದಲ್ಲಿ ಹೀಗೆ ನಿವೇದಿಸುತ್ತಾಳೆ.

'ಹಸಿವಾದಡೆ ಬಿಕ್ಷಾನ್ನಗಳುಂಟು
ತೃಕ್ಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು
ಅಂಗಶೀತಕ್ಕೆ ಬೀಸಾಟ ಅರಿವೆಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯಾ
ಆತ್ಮ ಸಂಗಾತಕ್ಕೆ ನೀನೆನಗುಂಟು

*ಅಕ್ಕನ ವ. ೩೩೬ ಪು. ೧೦೪*

ಈ ವಚನ ಅಕ್ಕನ ಜೀವನದ ಪಥದ ಹಲವು ನೋವಿನ ರೀತಿಯನ್ನು ಬಿಚ್ಚಿ ತೋರಿಸುತ್ತದೆ. ಹಾಗೂ ತನ್ನ ಬದುಕಿನ ಪ್ರತಿಯೊಂದು ಅವಶ್ಯಕತೆಗಳನ್ನು ಈ ಸೃಷ್ಟಿಯ ಮೂಲಕ ತೀರಿಸಿಕೊಳ್ಳುವುದಾಗಿ ತಿಳಿಸುತ್ತಾಳೆ ಎಲ್ಲಕ್ಕಿಂತ ಹೆಚ್ಚಾಗಿ ಅವಳಿಗೆ ಸದಾ ಜೊತೆಯಲ್ಲಿ ಆ ಚನ್ನ ಮಲ್ಲಿಕಾರ್ಜುನನಿರುವುದನ್ನು ಅವಳು ಇಲ್ಲಿ ಸ್ಪಷ್ಟಪಡಿಸುವುದು ಬಹು ಮುಖ್ಯವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿ ತಮ್ಮ ಬದುಕಿನಲ್ಲಿ ನಡೆಯುವಾಗ ನಮ್ಮೊಂದಿಗೆ ದೇವನಿದ್ದಾನೆ. ಬದುಕಿನ ಎಲ್ಲ ಆಗು ಹೋಗುಗಳಲ್ಲಿ ಅವನು ನಮ್ಮೊಂದಿಗಿರುತ್ತಾನೆ. ಕಾರಣ ಏಕೆ? ಅಂಜಬೇಕು ಎನ್ನುವ ಮಾರ್ಗ ಸೂಚಿತವಾಗುತ್ತದೆ. ಈ ಸಂದರ್ಭಗಳನ್ನು ಹೇಳುವಾಗ ಅಕ್ಕ ಪ್ರಕೃತಿಯ, ಕೆರೆ, ಹಳ್ಳ, ಬಾವಿ, ದೇಗುಲಗಳ ಪ್ರತೀಕಗಳನ್ನು ಬಳಸಿಕೊಂಡಿರುವ ರೀತಿ ಅಕರ್ಷಕವಾಗುತ್ತದೆ.

'ಆರೂ ಇಲ್ಲದವಳೆಂದು ಅಳಿಗೊಳಲುಬೇಡ ಕಂಡೆಯ್ಯಾ?
ಏನ ಮಾಡಿದಡೂ ಆನಂಜುವಳಲ್ಲಾ
ತರಗೆಲೆಯ ಮೆಲಿದು ಅನಿಹೆನು
ಚೆನ್ನಮಲ್ಲಿಕಾರ್ಜುನಯ್ಯಾ ಕರ ಕೇಡನೊಡ್ಡಿದಡೆ
ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳೆಹೆನು

*ಅಕ್ಕನ ವ. ಸಂ. ೬೫ ಪು.ಸಂ. ೨೮*

ಸರ್ವಾರ್ಪಣ ಭಕ್ತಿಯ ಆಂತರಿಕ ನೆಲೆಯಲ್ಲಿ ಧೃಡಗೊಂಡಿರುವ ಮಹಾದೇವಿಯಕ್ಕನ ಅನುಭಾವದ ಸತ್ವ ಅಪೂರ್ವವಾದುದು. ಪರತತ್ವ ಸಂಪಾದನೆ ಸರಳವಾದುದಲ್ಲ; ಆ ಮಾರ್ಗ ಕಲ್ಲು, ಮುಳ್ಳು, ಗಿಡ, ಬಳ್ಳಿ ಕಂಟಗಳಿಂದ ಕೂಡಿದ್ದು, ಏರು-ಇಳುವು, ತಗ್ಗು, ದಿನ್ನೆಗಳ ದುರ್ಗಮದಾರಿ ಅದು. ಅದರಲ್ಲೂ ಸಾಧಕರನ್ನು ಸದಾ ಪರೀಕ್ಷೆಗೆ ಒಡ್ಡಿ ನೋಡುವ ಶಿವನ ಅಗ್ನಿ ಪರೀಕ್ಷೆಗಳಿಗೆ ಭಕ್ತನಾದವನು ಸದಾ ಸಿದ್ಧನಾಗಿರಬೇಕು. ಅನುಭಾವಿಯಲ್ಲಿರಬೇಕಾದ ನಿರ್ಭಿತಿ, ನಿರ್ಮಮತೆಯ ಗುಣ ಅಕ್ಕನಲ್ಲಿ ಮನೆಮಾಡಿಕೊಂಡಿದೆ. ಅದನ್ನವಳು 'ಸಸ್ಯದ' 'ತರಗಲೆ'ಯನ್ನು ಇಲ್ಲಿ ಉಪಯೋಗಿಸಿಕೊಂಡು ತನ್ನ ಅನುಭಾವವನ್ನು ಪ್ರಸ್ತುತಪಡಿಸಿರುವುದು ಮನಮೋಹಕವಾಗುತ್ತದೆ.

ತಾನು ದೃಢವಾಗಿ ನಂಬಿ, ಚನ್ನಮಲ್ಲಿಕಾರ್ಜುನನ್ನು ಸ್ವಾಧೀನ ಮಾಡಿಕೊಳ್ಳಲು ಸಾಗಿದ ಪಥದಲ್ಲಿ ಏನೇ ಬಂದರೂ ಧೃತಿಗೆಡದ ಮಹಾದೇವಿ' ಏನ ಮಾಡಿದಡೂ ಆನಂಜುವಳ್ಳಲ್ಲ' ಎಂಬುದನ್ನು ಸ್ಪಷ್ಟಪಡಿಸಿದರೂ ಸಹ ಲೌಕಿಕ ಜಗತ್ತಿನಲ್ಲಿ ಅವಳು ಪಟ್ಟ ಪಾಡು ಹೇಳತೀರದಾಗಿತ್ತೆಂಬುದನ್ನು ಮರೆಯುವಂತಿಲ್ಲ. ಹೀಗೆ ಪರಮಾತ್ಮನ ಹಂಬಲದಲ್ಲಿ ಲೌಕಿಕ ಬದುಕಿನಿಂದ ಬೇರ್ಪಟ್ಟು ಲೋಕನೀತಿಗೆ ಅಪವಾದವಾಗಿ-ವಿಯೋಗ ದು:ಖಿಯಾಗಿರುವ ಮಹಾದೇವಿಯಕ್ಕನಿಗೆ 'ಪ್ರಕೃತಿಯೋ' ಸಂಗಾತಿಯಾಗಿರುವುದನ್ನು ಅವಳ ಈ ವಚನಗಳ ಅಧ್ಯಯನದಲ್ಲಿ ಕಾಣಬಹುದು.

ಪ್ರಕೃತಿ ಪರಮಾತ್ಮನ ಆ ವಾಸಸ್ಥಾನವಾಗಿ ಕಂಡಿದೆ. ತನ್ನೊಳಗೆ ದೀಪ್ತಗೊಂಡಿರುವ 'ಪರಶಿವ'ನ ಸ್ವರೂಪ ಸಮಸ್ತ ಪ್ರಕೃತಿಯ ಸಸ್ಯ, ಪ್ರಾಣಿ, ಪಕ್ಷಿ ಸಂಕುಲದಲ್ಲಿ ಅಂತರಗತವಾಗಿರುವಂತೆ ಭಾವಿಸುತ್ತಾಳೆ ಅವಳ ಈ ಸಂಬಂದದ ವಚನಗಳಲ್ಲಿ ಈ ನೆಲೆಯನ್ನು ತುಂಬಾ ಮೇಲ್ನೋಟದಲ್ಲಿ ಗುರುತಿಸಬಹುದಾಗಿದೆ.

ಸಮಸ್ತ ಚರಾಚರ ಪ್ರಪಂಚವೇ ಆ ಚನ್ನ ಮಲ್ಲಿಕಾರ್ಜುನನ ಹಂಬಲದಿಂದ ತತ್ತರಿಸುತ್ತಿರುವಂತೆ 'ಮಹಾದೇವಿ'ಗೆ ಭಾಸವಾಗಿದೆ. ಗಿಡ-ಮರ-ಹೂ ಬಳ್ಳಿ, ಗಿಳಿ-ಕೋಗಿಲೆ-ಹಂಸ, ದುಂಬಿ, ನವಿಲು, ಆನೆ-ಕುದರೆ, ಎಮ್ಮೆ ಮೊದಲಾದ ಜಡ-ಚೇತನ ಪ್ರಕೃತಿಯಲ್ಲಿ

ಮನೆಮಾಡಿಕೊಂಡಿರುವ ಆ ದೇವನನ್ನು ತೋರಿಸುವಂತೆ ಅವಳು ಪ್ರಕೃತಿಯ ಅಂಗ ಅಂಗಾಂಗಳನ್ನು ಪ್ರಾರ್ಥಿಸಿಕೊಂಡಿದ್ದಾಳೆ. ಸಕಲ ಜೀವರಾಶಿಗಳಲ್ಲಿ ಅಂತರ್ನಿಹಿತವಾಗಿರುವ 'ಆ ಶಿವತತ್ವ'ವು ಚರಾಚರವಾದ ಈ ಸೃಷ್ಟಿಯಲ್ಲಿಯೂ ಅಡಕವಾಗಿದೆ [೧೧] **ಪ್ರಕೃತಿ-ಪರಮಾತ್ಮ ಸಂಬಂಧವು ಶಿವ-ಜೀವ ಸಂಬಂಧದಂತೆಯೇ ಅನಾದಿ ಶಾಶ್ವತ** ಎನ್ನುವ ನಂಬಿಕೆ ಅನುಭಾವಿ ಅಕ್ಕನಲ್ಲಿ ಗಾಢವಾಗಿರುವುದನ್ನು ನಾವಿಲ್ಲಿ ಗುರುತಿಸಬಹುದಾಗಿದೆ.

ಹೊರಗಿರುವ ಪರಮಾತ್ಮ ತನ್ನೊಳಗೇ ಅಡಗಿರುವ ಸತ್ಯದ ಅನುಭೂತಿಯು ಅಕ್ಕನಿಗೆ ಅಪರಮಿತ ಆನಂದವನ್ನು ತಂದಿರುವುದೂ ಇಲ್ಲಿ ಗಮನಾರ್ಹ.

'ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೆ
ಸೂರ್ಯಕಾಂತದದ ಅಗ್ನಿಯನಾರು ಭೇದಿಸಬಲ್ಲರು?
ಅಪಾರ ಮಹಿಮೆ ಚೆನ್ನಮಲ್ಲಿಕಾರ್ಜುನಾ
ನೀನೆನ್ನೊಳಗಡಗಿಪ್ಪ ಪರಿಯ
ಬೇರಿಲ್ಲದೆ ಕಂಡು  ಕಣ್ದೆರೆದೆನು

*ಅಕ್ಕನ ವ. ಸಂ. ೪೧೮ ಪು.ಸಂ.೧೨೬*

ಭಿನ್ನಭಾವವಿಲ್ಲದ ಹಾಗೆ ಎಲ್ಲದರಲ್ಲಿರುವ 'ಸರ್ವಭರಿತ' ಚನ್ನಮಲ್ಲಿಕಾರ್ಜುನನನ್ನು ತನ್ನೊಳಗೆ ಕಂಡು ಅನುಭವಿಸಿದ ಅನುಭಾವಿಗಳಲ್ಲಿ 'ಮಹಾದೇವಿಯಕ್ಕಳೂ ಒಬ್ಬಳು ಹೊರ ಪ್ರಪಂಚದ ಎಲ್ಲ ವೈವಿಧ್ಯತೆ, ವಿಷಮತೆ, ಭಿನ್ನತೆಗಳಲ್ಲೂ 'ಎಕರೂಪಿಯಾಗಿ' ಅಂತರ್ಗತವಾಗಿರುವ ಅಖಂಡ ಪರಮಾತ್ಮನನ್ನು ಅನುಭವಿಸುವ ಪ್ರಜ್ಞೆ-ಅಕ್ಕನ ಅಪೂರ್ವಸಿದ್ಧಿ. ಹೀಗೆ ಸರ್ವವ್ಯಾಪಕವಾದ ಚನ್ನಮ್ಲಿಕಾರ್ಜುನನ್ನು ಎಲ್ಲ ವಸ್ತುಗಳಲ್ಲಿ, ಎಲ್ಲರಲ್ಲಿ ಕಾಣಬಲ್ಲ ಅಕ್ಕಮಹಾದೇವಿಗೆ ಲೌಕಿಕ ತರತಮಗಳು, ಮನುಷ್ಯನಿರ್ಮಿತ ಭೇದ-ಭಾವಗಳು ಗೌಣವಾಗಿ ಕಂಡವು, ಸಕಲವೂ ಶಿವಮಯ ಎನ್ನವ ಸಮಷ್ಟಿ ಶಿವದರ್ಶನವು ಅನುಭಾವಿ ಅಕ್ಕನ ಜೀವನ ಧರ್ಮವಾಗುತ್ತಿದೆ. ಹೀಗಾಗಿ ನಡೆ-ನುಡಿಯಲ್ಲಿ ಈ ಏಕೋಭಾವವೇ ಎಲ್ಲೆಲ್ಲೂ ವ್ಯಕ್ತಿವಾಗಿದೆ.

ಶರಣಧರ್ಮದ ಬೆಳವಣಿಗೆಗೆ ಕಾರಣವಾದವರಲ್ಲಿ ಅನೇಕರಿದ್ದಾರೆ ತಮಗಿಂತ ಪೂರ್ವದಲ್ಲಿದ್ದು, ಈ ಧರ್ಮಕ್ಕೆ ಕೊಡುಗೆ ನೀಡಿದವರನ್ನು ಅಂದರೆ ಪುರಾತನರನ್ನು ಮಹಾದೇವಿಯಕ್ಕ ಅತ್ಯಂತ ಭಕ್ತಿಗೌರವಾದರಗಳೊಂದಿಗೆ ನೆನೆಯುತ್ತಾಳೆ. ಮಹಾದೇವಿಯಕ್ಕನ ಕಾಲಕ್ಕಾಗಲೇ ಲಿಂಗೋದ್ಭವರೆನ್ನುವ ಮನ್ನಣೆಗೆ ಪಾತ್ರರಾದವರು, ಲಿಂಗಜೀವಿಗಳಾಗಿ ಬದುಕಿ ಹೋದವರು, ಲಿಂಗದಲ್ಲಿ ಬಯಲಾದವರನ್ನು ಮಹಾದೇವಿಯಕ್ಕ ಅನನ್ಯ ಭಕ್ತಿಯಿಂದ ಸ್ಮರಿಸಿರುವುದನ್ನಿಲ್ಲಿ ಕಾಣಬಹುದು.

೧೧. ಡಾ॥ ಶಾಂತಾ ಇಮ್ರಾಪೂರ – ಉಡುತಡಿಯ ಮಹಾದೇವಿಯಕ್ಕ ಪು. ೭೧

ಅಂಕೋಲೆಯ ಬೀಜದಿಂದಾಯಿತ್ತು ವೃಕ್ಷವು
ಆ ವೃಕ್ಷ ಮರಳಿ ಆ ಬೀಜದೊಳಗಿತ್ತು
ಆ ಪ್ರಕಾರದಲ್ಲಿ ಲಿಂಗದೊಳಗಿಂದ ಪುರಾತನರುದ್ಭವಿಸಿ
ಮರಳಿ ಆ ಪುರಾತನರು ಆ ಲಿಂದೊಳಗೆ
ಬೆರಸಿದರು ನೋಡಿರಯ್ಯಾ
ಇಂತಪ್ಪ ಪುರಾತನರಿಗೆ ನಾನು ಶರಣೆಂದು ಹುಟ್ಟುಗೆಟ್ಟೆನಯ್ಯಾ
ಚನ್ನಮಲ್ಲಿಕಾರ್ಜುನಾ

*ಅಕ್ಕನ ವಂ.೧೧೫ ಪು.ಸಂ. ೧೧೯*

ಅತಿಮಾನವರಾಗಿ ಬಾಳಿದ ಪುರಾತನರು ನಡೆನುಡಿಗಳಲ್ಲಿ ಸತ್ಯದರ್ಶನವನ್ನು ಪ್ರತಿಫಲಿಸಿದ ಈ ಶಿವಸ್ವರೂಪಿಗಳನ್ನು–'ವೃಕ್ಷ–ಬೀಜ ಪ್ರತಿಮೆಯ ಮೂಲಕ ವಿವರಿಸಿರುವುದನ್ನು ಗಮನಿಸಬಹುದು. ಬೀಜ ಮೊದಲೋ? ವೃಕ್ಷ ಮೊದಲೋ? ಎಂಬುದನ್ನು ಪ್ರಶ್ನಿಸುವ ನಾವು ಇಲ್ಲಿ ಆ ಪರಶಿವನ ಶಕ್ತಿ ಸಂಕೇತವನ್ನು ಗುರುತಿಸಬಹುದಾಗಿದ್ದು, ಆ ಅಲೌಕಿಕ ಶಕ್ತಿ ಸಂಪನ್ನವಾದ 'ಲಿಂಗ' ರೀತಿಯನ್ನು ಇಲ್ಲಿ ಕಾಣಬಹುದಾಗಿದೆ.

ಮನುಷ್ಯ ಸಂಬಂಧ, ದೇಹದ ಪ್ರಾಕೃತಿಕ ಗುಣಧರ್ಮ ಮತ್ತು ಸೃಷ್ಟಿಯ ಲೌಕಿಕ ಗುಣಧರ್ಮ ಹಾಗೂ ಮನಸ್ಸಿನ ಸಂಚಲವನ್ನು ಅದರೊಂದಿಗೆ ಜೀವಭಾವದ ಲೌಕಿಕ ನೆಲೆಗಳನ್ನು ತಾಧ್ಯಾತ್ಮಗೊಳಿಸಿ, ಅವುಗಳನ್ನು ಆಧ್ಯಾತ್ಮಿಕ ನೆಲೆಗೆ ವಿಸ್ತರಿಸಿಕೊಂಡಿರುವ ನಿರಂತರ ಹೋರಾಟ ಅಕ್ಕನ ಬದುಕಿನಲ್ಲಿ ನಡೆದಿರುವುದು ಈ ಅಧ್ಯಯನದಿಂದ ತಿಳಿದು ಬರುತ್ತದೆ. ಮಹಾದೇವಿಯಕ್ಕನ ಅನುಭಾವದ ನೆಲೆ ವೈರಾಗ್ಯ ಮೂಲವಾದುದು ಸರ್ವಾರ್ಪಣ ಭಾವದ ಆನಂದ ಭಕ್ತಿಯೇ–'ಶರಣಸತಿ–ಲಿಂಗಪತಿ' ತತ್ವದ ಜೀವಾಳವೆನಿಸಿದ್ದು, ಅಂಗ–ಮನ–ಭಾವಗಳನ್ನೆಲ್ಲ ಲಿಂಗಾಪಿರ್ತಗೊಳಿಸಿದ ಮಹಾಚೇತನ ಶಕ್ತಿಯ ಸ್ವರೂಪದರ್ಶನ ಇಲ್ಲಿದೆ. ಈ ರೀತಿಯಲ್ಲಿ ಸೃಷ್ಟಿ ಪ್ರಪಂಚದ ಮೂಲಕ ತನ್ನ ಬದುಕನ್ನು ಹಾಗೂ ಬದುಕಿನ ಒಂದೊಂದು ಸಂದರ್ಭಗಳನ್ನು ಅನಾವರಣಗೊಳಿಸುತ್ತ, ಸರ್ವಾರ್ಪಣ ಭಕ್ತಿಯಿಂದ ಕಾಯ–ಅಕಾಯವಾಗಿಸಿಕೊಂಡು–ಸೃಷ್ಟಿಯ ಮೂಲಕ ಲಿಂಗಪತಿಗೆ ಶರಣಸತಿಯಾದ ಅಕ್ಕಕನ ಜೀವನ ಅನುಪಮವಾದುದು ಹಾಗೂ ದರ್ಶನಾತ್ಮಕವಾದುದೆಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಈ ಅನನ್ಯ 'ಅನುಭಾವ'ದ ಔನ್ನತ್ರವನ್ನು ಅವುಗಳಲ್ಲಿರುವ ಸೋಗಸಾದ ಕಾವ್ಯಾಭಿವ್ಯಕ್ತಿಯ ಗುಣಗಳನ್ನು ಮನಗಂಡಿಸುವ ಜ್ಞಾನ ಮೂರ್ತಿ ಚನ್ನಬಸವಣ್ಣನವರು–

'ಆಧ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ

ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ

ಸಿದ್ಧರಾಮಯ್ಯಾ [೩] ಎಂಬುದಾಗಿ ಹೇಳಿರುವುದು ತುಂಬಾ ಅರ್ಥಪೂರ್ಣವಾದ ಮಾತು ಅಷ್ಟೇ ಅಲ್ಲ; ಅದು ಸತ್ಯಸಂಗತಿ ಎನಿಸುತ್ತದೆ.

*೩. ಘೂಳೂರು ಸಿದ್ಧವೀರಣ್ಣೊಡೆಯ ಶೂನ್ಯ ಸಂಪಾದನೆ - ಪು. ೨೫*

# ಕನ್ನಡ ಪ್ರಕೃತಿ ಸಾಹಿತ್ಯಕ್ಕೆ ಅಕ್ಕಮಹಾದೇವಿಯ ಕೊಡುಗೆ

ವೀರ ವೈರಾಗ್ಯಕ್ಕೆ ಮೂರ್ತಿರೂಪತಳೆದಂತಿದ್ದ ಅಕ್ಕ ಕ್ರಾಂತಿಕಾರಿ ವಿಚಾರವಾದಿ "ಎಮ್ಮೆಗೊಂದು ಚಿಂತೆ, ಸಮಗಾರನಿಗೊಂದು ಚಿಂತೆ, ನಿನಗೆ ನಿನ್ನ ಕಾಮದ ಚಿಂತೆ ಎನಗೆ ಎನ್ನ ಚನ್ನಮಲ್ಲಿಕಾರ್ಜು ಒಲಿವನೋ? ಒಲಿಯನೋ? ಎಂಬ ಚಿಂತೆ, ಒಲ್ಲೆ ಹೋಗಾ। ಶರಣ ಬಿಡು ಮರಳೆ" ಎಂದು ಹೇಳಿ ಉಟ ಉಡುಗೆಯನ್ನೇ ಕಚಳಿ, ಮಲ್ಲಿಕಾರ್ಜುನನ್ನೇ ನಂಬಿ ಹೊರಟವಳು ಆಕೆ ಭಕ್ತಿಯ ತವನಿಧಿ, ಮುಕ್ತಿಯ ಮಾರ್ಗ ಈ ಪ್ರಾಕೃತಿಕ ಪ್ರಪಂಚವೆಂಬುದನ್ನು ತೋರಿಸಿದವಳು ಈ ಪರಾಕೃತಿಕ ಬದುಕಿನಲ್ಲಿ ಬಂದ ಅವಳ ಒಂದೊಂದು ವಚನಗಳು ಅಣಿಮುತ್ತುಗಳು ಹಗೂ ಅನುಭಾವ ತುಂಬಿದ ಗಣಿಗಳಾಗಿವೆ. ಘನ ಘನವಾಗಿದ್ದ ಚನ್ನಮಲ್ಲಿಕಾರ್ಜುನನನ್ನು ಸಾಕ್ಷಾತ್ಕರಿಸಿಕೊಂಡ ಅನುಭಾವದ ಈ ಸೃಷ್ಟಿಯ ವಚನಗಳು ಕನ್ನಡ ಸಾಹಿತ್ಯಕ್ಕೆ ಶ್ರೇಷ್ಠ ಕೊಡುಗೆಯಾಗಿವೆ. ಎನ್ನಬಹುದು. 'ಆಧ್ಯಿತ್ಮ ಮತ್ತು ಪ್ರಾಣಿ–ಪಕ್ಷಿ ಸಂಕುಲದ ಸಮ್ಮಿಳನದಲ್ಲಿ ಅಕ್ಕಮಹಾದೇವಿ' ಶರಣರಲ್ಲಿಯೇ ಮೊದಲಗಿತ್ತಿ ಎನಿಸುತ್ತಿದ್ದಾಳೆ ಕನ್ನಡದ ಕಬ್ಬಿ ಶಿಲಿಯಲ್ಲಿ ಮೊದಲನೆಯವಳಾದ ಮಹಾದೇವಿಯಕ್ಕ 'ಆಧ್ಯಾತ್ಮಕ ಆಧ್ಯತೆಯ ಯೋಗಗ್ಯತೆಯ ದೃಷ್ಟಿಯಿಂದಲೂ ಮೊದಲನೆಯ ವೆಳೆನಿಸುತ್ತಾಳೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಪ್ರಾಣಿ, ಪಕ್ಷಿ, ಸಸ್ಯ ಸಂಕುಲವನ್ನು ಸಂಕೇತಿಸಿ ಬರೆದಿರುವ ವಚನಗಳು ಏಣಿಕೆಯಲ್ಲಿ ಕಡಿಮೆ ಎನ್ನಬಹುದಾದರೂ, ಅವುಗಳ ಘನತೆ ಕಿರಿದೆನ್ನಬಹುದೇ?" ಸಾಧ್ಯವಿಲ್ಲ ಯಾಕಂದರೆ ವರ್ಣನೆಯಲ್ಲಿ ೧೪ ವರ್ಣನೆಗಳಿರಲಿಕ್ಕಿಲ್ಲ, ಆದರೆ ತನ್ನ ಸ್ವಾನುಭಾವದಿಂದ, ತಾನು ಏರಿನಿಂತ ನಿಲುವಿನ ಮಹಿಮೆಯಿಂದ, ಅರುವಿನ ಆಳದಿಂದ, ಅವುಗಳನ್ನು ಅಭಿವ್ಯಕ್ತಿಸುವ ಕ್ರಮದಿಂದ ಆ ವಚನಗಳಿಗಿರುವ ಹಿರಿಮೆಗರಿಮೆಗಳನ್ನು ಅಲ್ಲಗಳೆಯಲಾಗುವುದಿಲ್ಲ. ಆದ್ದರಿಂದ ಅಕ್ಕನ ಅನುಪಮವಾದ ಅನುಭಾವ ಸಂಪತ್ತಿನಿಂದ ಕೂಡಿರುವ ಇಂಥ ವಚನಗಳಿಂದ ಕನ್ನಡ ಸಾಹಿತ್ಯ ತನ್ನ ಶ್ರೀಮಂತಿಕೆಯನ್ನು ಅಪಾರವಾಗಿ ಬೆಳೆಸಿಕೊಂಡಿದೆ ಎಂದು ಹೇಳಬಹುದು.

'ಲಾಲಿತ್ಯ, ಪ್ರಸಾದ, ಮಾಧುರ್ಯಗುಣಗಳು ಅಕ್ಕನ ಈ ಅಭಿವ್ಯಕ್ತಿಯ ವಚನಗಳ ಪ್ರಧಾನಗುಣ ಅವುಗಳಲ್ಲಿಯ ವಾಸ್ತವಿಕ ಚಿತ್ರಗಳು ಆಧ್ಯಾತ್ಮದ ಅನುಸಂದಾನವನ್ನು ಬಿಚ್ಚಿ ಬಿಚ್ಚಿ ತೋರುತ್ತವೆ. ದೈವೀಶಕ್ತಿಯ ಮೀಡಿತವಿರುವ ಅವು ಸಹೃದಯರ ಮನಸ್ಸನ್ನು ತಟ್ಟನೆ ಮುಟ್ಟಿ ಅದರನ್ನು ಮಂಚ್ರ ಮುಗ್ದಗೊಳಿಸುತ್ತವೆ. ಭಾಷೆ ಸರಳ, ವಾಕ್ಯ ಸಣ್ಣವು, ಸಾಮಾನ್ಯ

ಶಬ್ದಗಳಲ್ಲೂ, ಆಳ ಅರ್ಥವನ್ನು ಹುಡುಗಿಸಿಟ್ಟು ಸೂತ್ರ ರೂಪವಾಗಿ ಹೇಳುವ ಶಕ್ತಿಯಿರುವ ಈ ವಚನಗಳು, ತಮ್ಮ ಚಿತ್ರಣ ಶಕ್ತಿಯಿಂದಾಗಿ ಹೇಳಬೇಕಾದ ವಿಷಯವನನು ಮಾರ್ಮಿಕವಾಗಿ ಎದುರಿಗೆ ಮಿಲ್ಲಿಸುತ್ತವೆ ಈ ಎಲ್ಲ ಗುಣಗಳಿಂದ ಕನ್ನಡ ಸಾಹಿತ್ಯಕ್ಕೆ ಅಕ್ಕನ ಕೊಡುಗೆ ಅಪಾರವಾದುದು ಎಂದು ಹೇಳಬಹುದು.

*೪. ಆರ್.ಸಿ.ಹಿರೇಮಠ 'ಅಕ್ಕನ ವಚನಗಳು- ಪ್ರಸ್ತಾವನೆ ಪು. ೫*

# ಅನುಬಂಧ–೧
# ಸಹಾಯಕ ಗ್ರಂಥಗಳು

| ಅನುಕ್ರಮ ಸಂಖ್ಯೆ | ಗ್ರಂಥದ ಹೆಸರು | ಲೇಖಕರು | ಪ್ರಕಾಶನ ಮತ್ತು ವರ್ಷ |
| --- | --- | --- | --- |
| ೧ | ಶಿವಶರಣೆಯರ ವಚನ ಸಂಪುಟ (ಜನಪ್ರಿಯ ಆ ವೃತ್ತಿ) | ಸಂ. ಡಾ.ವೀರಣ್ಣ ರಾಜೂರ | ಕನ್ನಡ ಮತ್ತು ಸಂಸ್ಕೃತಿ ಇಲಾಖೆ ೧೯೯೩ |
| ೨ | ಅಕ್ಕಮಹಾದೇವಿಯ ವಚನಗಳು | ಸಂ. ಡಾ।ಆರ್.ಸಿ. ಹಿರೇಮಠ | ಕನ್ನಡ ಅಧ್ಯಯನ ಸಂಸ್ಥೆ ಕ.ವಿ.ವಿ. ಧಾರವಾಡ |
| ೩ | ಅಕ್ಕಮಹಾದೇವಿ | ಡಾ।ಶಾಂತಾ ಇಮ್ರಾಪೂರ | ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ ಮೂರು ಸಾವಿರ ಮಠ ಹುಬ್ಬಳಿ ೨೦೦೧ |
| ೪ | ಬಸವ ಪರುಷ | ಸಂ.ಡಾ>ಹಾಮಾ.ನಾಯಕ | ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ೧೯೭೫ |
| ೫ | ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೩.೪ | ಸಂ.ಡಾ।ಜಿ.ಎಸ್. ಶಿವರುದ್ರಪ್ಪ | ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ೧೯೭೬ |
| ೬ | ವಚನ ನಿರ್ವಚನ | ಡಾ॥ ಪಿ.ವಿ.ನಾರಾಯಣ | ಪುಸ್ತಕಾಲಯ ಪ್ರಕಾಶಕರು ಮೈಸೂರು ೧೯೯೦ |
| ೭ | ವಚನ ಸಾಹಿತ್ಯ | ಡಾ। ಎಂ. ಚಿದಾನಂದ ಮೂರ್ತಿ | ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು ೨೦೦೦ |
| ೮ | ಶರಣರು ಕಂಡ ವನ್ಯಜೀವಿಗಳು | ಸಂ।ಎಸ್.ಎಫ್.ಉಪ್ಪಿನ | ಸರಸ್ವತಿಪುರ ಧಾರವಾಡ ೧೯೯೧ |
| ೯ | ಶರಣಸಿರಿ | ಡಾ। ಸೋಮನಾಥ ಯಾಳವಾರ | ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗಾ ೨೦೦೨ |
| ೧೦ | ಪುಲಿಗೆರೆಯ ಅದಯ್ಯ | ಡಾ॥ ಸೋಮನಾಥ ಯಾಳವಾರ | ಶ್ರೀ ಚನ್ನಬಸವೇಶ್ವರ ಸಂಸ್ಥಾನ ಮಠ ಹಾರಕೂಡ ೨೦೦೫ |
| ೧೧ | ಉಡುತಡಿಯ ಮಹಾದೇಯಕ್ಕ | ಡಾ। ಶಾಂತಾ ಇಮ್ರಾಪೂರ | --ಅದೇ-- |
| ೧೨ | ವಚನ ಚಳುವಳಿ | ಡಾ॥ ಬಸವರಾಜ ಸಬರದ | ಪಲ್ಲವಿ ಪ್ರಕಾಶನ ಗುಲಬರ್ಗಾ |
| ೧೩ | ಶರಣ ತತ್ವಚಿಂತನ | ಗೊ.ರು.ಚನ್ನಬಸಪ್ಪ | ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು ಬೆಂಗಳೂರು೧೯೮೮ |

| | | | |
|---|---|---|---|
| ೧೪ | ಕಲ್ಯಾಣ ಪಣತೆ | ಸಂ. ಡಾ।ಬಸವರಾಜ ಬಲ್ಲೂರ | ನಾವು ಪ್ರಕಾಶನ ಬೀದರ ೨೦೦೫ |
| ೧೫ | ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನ ಸಿದ್ಧಿ | – | ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ– ೧೯೭೬ |
| ೧೬ | ಶರಣ ಸರಣಿ | ಡಾ॥ ಸಿದ್ಧಯ್ಯಾ ಪುರಾಣಿಕ | ತರಳಬಾಳು ಜಗದ್ಗುರು ಬ್ರಹನ್ಮಠ ಸಿರಿಗೆರೆ ೧೯೯೨ |
| ೧೭ | ಸೌಂದರ್ಯ ಮೀಮಾಂಸೆ | ಡಾ॥ ಜಿ.ಶ್ರೀನಿವಾಸನ್ | ಜಿ.ವಿ.ಕೆ. ಮೂರ್ತಿ ಮೈಸೂರು ೧೯೭೩ |
| ೧೮ | ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ | ಡಾ, ಚಿ.ಸಿ. ನಿಂಗಣ್ಣ | ಸಿದ್ಧಲಿಂಗೇಶ್ವರ ಪ್ರಕಾಶನ ಗುಲ್ಬರ್ಗಾ ೨೦೦೮ |
| ೧೯ | ಕನ್ನಡ ಸಾಹಿತ್ಯ ಚರಿತ್ರೆ | ರಂಶ್ರೀ ಮುಗಳಿ | ಗೀತಾ ಬುಕ್ ಹೌಸ್ ಪ್ರಕಾಶಕರು ಮೈಸೂರು ೧೯೫೩, |
| ೨೦ | ವಡ್ಡರಾಧನೆ | ಸಂ. ಡಾ. ಡಿ.ಎಲ್ ನರಸಿಂಹಚಾರ್ಯರು | ಡಿ.ವಿ.ಕೆ. ಮೂರ್ತಿ ಮೈಸೂರು ಪ್ರಿ ಅಂಡ್ ಪಬ್ಲಿಕೇಶನ್ ೧೯೯೨, |
| ೨೧ | ಮಾತೃಭಾಷೆ ತತ್ವ ಮತ್ತು ಭೋಧನಾ ಮಾರ್ಗ | ಅನಸೂಯ ವಿ. ಪರಗಿ | ಅನಸೂಯ ಪ್ರಕಾಶನ ಬೆಂಗಳೂರು ೧೯೯೦, |
| ೨೨ | ಸಹಾಸಭೀಮ ವಿಜಯಂ | ಅರ್. ವಿ. ಕುಲಕರ್ಣಿ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ೨೦೦೪, |
| ೨೩ | ಶರಣರ ಅನುಭಾವ ಸಾಹಿತ್ಯ | ಡಾ. ಎಚ್. ತಿಪ್ಪೇರುದ್ರ ಸ್ವಾಮಿ | ಡಿ.ವಿ.ಕೆ. ಪ್ರಕಾಶಕರು ಮೈಸೂರು ೧೯೬೩, |
| ೨೪ | ವಚನಧರ್ಮ ಸಾರ | ಎಂ.ಆರ್. ಶ್ರೀನಿವಾಸ ಮೂರ್ತಿ | ಪ್ರಸಾರಂಗ ಮೈಸೂರು ವಿ.ವಿ. ಮೈಸೂರು ೧೯೬೮, |
| ೨೫ | ಅಕ್ಕನ ವಚನಗಳು | ಸಂ. ಡಾ. ಸಾ,ಶಿ, ಮರುಳಯ್ಯ | ಸಪ್ನ ಬುಕ್ ಹೌಸ್ ಬೆಂಗಳೂರು ೨೦೦೮, |
| ೨೬ | ಭಕ್ತವಾಣಿ | ಸಂ. ಈಟಗಿ ಈರಣ್ಣ | ಪ್ರಸಾರಂಗ ಗು.ವಿ.ಗು ೧೯೯೮ |
| ೨೭ | ಸಮಗ್ರ ಗದ್ಯ | ಜಿ.ಎಸ್. ಶಿವರುದ್ರಪ್ಪ | ಶಾರದಾ ಪ್ರಕಾಶನ ಬೆಂಗಳೂರು ೧೯೯೩, |
| ೨೮ | ಅಕ್ಕನ ಪ್ರವಚನ | ಸದ್ಗುರು ಲಿಂಗಾನಂದ ಸ್ವಾಮಿ | ವಿಶ್ವ ಕಲ್ಯಾಣ ಮಿಷನ್ ಬೆಂಗಳೂರು ೧೯೬೨, |
| ೨೯ | ಅನುಭಾವ ಸಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ | ಬಸವರಾಜ ಕಲುಗುಡಿ | ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೧೯೯೮, |
| ೩೦ | ಕದಳಿಯ ಕರ್ಪೂರ | ಡಾ. ಎಚ್. ತಿಪ್ಪೇರುದ ಸ್ವಾಮಿ | ಡಿ.ವಿ.ಕೆ. ಪ್ರಕಾಶಕರು ಮೈಸೂರು ೧೯೬೨, |

